# ಹೊಸ ದಿಕ್ಕು

3, ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ





○ ಡಾ. ಚೆನ್ನಣ್ಣ ವಾಲೀಕಾರ, ಸುರೇಂದ್ರ ಕೆರಮಗಿ ಕುಂವಿ, ಬಸು ಬೇವಿನಗಿಡದ, ಈಶ್ವರಯ್ಯ ಮಠ,, ಮಲ್ಲಯ್ಯ ಪೋಲಿಂಪಲ್ಲಿ ಮುಂತಾದವರ ಕವನಗಳು ಹಾಗು ಪತ್ರಿಕೆಗೆ ಬಂದ ಪ್ರತಿಕ್ರಿಯೆಗಳು, ಸಾದರ ಸ್ವೀಕಾರ ಇತ್ಯಾದಿ.

( ಪ್ರಸಾರ – ಕೇವಲ ಸದಸ್ಯರಿಗೆ ಮಾತ್ರ )

* ಖಾಸಗಿ ಪ್ರಸಾರಕ್ಕಾಗಿ ಮಾತ್ರ

# ಹೊಸ ದಿಕ್ಕು ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ

ಸಂಪುಟ-೧ ಸಂಚಿಕೆ-೩ (ಸೆಪ್ಟೆಂಬರ-ಅಕ್ಟೋಬರ ೧೯೯೨)

ಸಂಪಾದಕ : ತಿಮ್ಮಯ್ಯ ಪುರ್ಲೆ
ಸಲಹೆ : ಚಂದ್ರಕಾಂತ ಕರದಳ್ಳಿ, ಎಸ್. ಬಿ. ಹೊನ್ಕಲ್, ಸೂಗಯ್ಯ ಹಿರೇಮಠ

ನೀವು ಕಳಸುವ ಚಂದಾ "ಹೊಸದಿಕ್ಕು" ಬೆಳವಣಿಗೆಯ ಸಂಕೇತ

ವಾರ್ಷಿಕ ಚಂದಾ : ರೂ. ೫೦-೦೦ † ಅಜೀವ ಚಂದಾ : ರೂ. ೫೦೦-೦೦

ಹೈದರಾಬಾದ ಕರ್ನಾಟಕ ಹಾಗು ಸುತ್ತಲಿನ ಬಿಜಾಪುರ, ಬಳ್ಳಾರಿ ಜಿಲ್ಲೆಗಳ ಲೇಖಕರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಮೂಲಕ ಕನ್ನಡ ನಾಡಿನಾದ್ಯಂತ ತಲುಪಲು ಇಚ್ಛಿಸುವ 'ಹೊಸದಿಕ್ಕು' ಗೆ ದಯವಿಟ್ಟು ನೀವು ಚಂದಾದಾರರಾಗಿ. ನಿಮ್ಮ ಸ್ನೇಹಿತರನ್ನು ಆಸಕ್ತರನ್ನು ಚಂದಾದಾರರಾಗಿಸಿರಿ ಲೇಖನ, ಕವನ, ಕಥೆ, ಇತ್ಯಾದಿ ಕಳಿಸುವವರು ಸ್ವೀಕೃತಿ ಬಗ್ಗೆ ತಿಳಿಯಲು ಸ್ವವಿಳಾಸದ ಕಾರ್ಡ್ ಇಡಿ.

ಸಂಪಾದಕರು :
'ಹೊಸದಿಕ್ಕು'
ಗೀತಾಂಜಲಿ ಬಿಲ್ಡಿಂಗ್
(ದಿಗ್ಗಿ ಬಿಲ್ಡಿಂಗ್ ಹತ್ತಿರ)
ಅಂಚೆ : ಶಹಾಪುರ-೫೮೫೨೨೩

ಚಂದಾ ಕಳಿಸುವ ವಿಳಾಸ :
ಚಂದ್ರಕಾಂತ ಕರದಳ್ಳಿ
ಶಹಾಪುರ ಪೇಟ,
ಶಹಾಪುರ-೫೮೫೨೨೩
ಕಲ್ಬುರ್ಗಿ ಜಿಲ್ಲೆ (ಕರ್ನಾಟಕ)

# ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

## ಕೊಪ್ಪಳ ಸಾಹಿತ್ಯ ಸಮ್ಮೇಳನ

ಬರುವ ಡಿಸೆಂಬರ ೯೨ರಂದು ಕೊಪ್ಪಳದಲ್ಲಿ ಅ. ಭಾ. ಸಾ. ಸಮ್ಮೇಳನ ನಡೆಯಲಿದೆ. ಈಗಾಗಲೇ ಸಮ್ಮೇಳನದ ಅಧ್ಯಕ್ಷರು ಯಾರು ? ಎನ್ನುವ ಚರ್ಚೆ ನಡೆದಿದೆ. ಕೇಳಿ ಬರುವ ಹೆಸರುಗಳೆಂದರೆ ಶ್ರೀ ಶಾಂತರಸರದು ಹಾಗೂ ಡಾ. ಸಿಂಪಿ ಲಿಂಗಣ್ಣನವರದು.

ಹಿರಿಯ ಕವಿ, ಕಥೆಗಾರ, ಹೆಸರಾಂತ ಲೇಖಕರಾದ ಶ್ರೀ ಶಾಂತರಸರು ಕೊಪ್ಪಳದಲ್ಲಿ ನಡೆಯುವ ಈ ಸಮ್ಮೇಳನದ ಅಧ್ಯಕ್ಷರಾಗುವದು ಹೆಚ್ಚು ಸಮಂಜಸ. ಕಲ್ಬುರ್ಗಿಯಲ್ಲಿ ನಡೆದ ಸಮ್ಮೇಳನಕ್ಕೆ ಡಾ. ಸಿದ್ದಯ್ಯ ಪುರಾಣಿಕರು, ಹುಬ್ಬಳ್ಳಿಯಲ್ಲಿ ನಡೆದ ಸಮ್ಮೇಳನಕ್ಕೆ ಡಾ. ಆರ್. ಸಿ. ಹಿರೇಮಠರು, ಮೈಸೂರಿನಲ್ಲಿ ನಡೆದ ಸಮ್ಮೇಳನಕ್ಕೆ ಕೆ. ಎಸ್. ನರಸಿಂಹಸ್ವಾಮಿಯವರು, ದಾವಣಗೆರೆಯಲ್ಲಿ ನಡೆದ ಸಮ್ಮೇಳನಕ್ಕೆ ಜಿ. ಎಸ್. ಶಿವರುದ್ರಪ್ಪನವರು ಅಧ್ಯಕ್ಷರಾದುದನ್ನು ಗಮನಿಸಿದಾಗ ಆ ಭಾಗದ ಹಿರಿಯ ಸಾಹಿತಿಗಳೇ ಅಧ್ಯಕ್ಷರಾದುದನ್ನು ಕಾಣಬಹುದು. ಡಾ. ಆರ್. ಸಿ. ಹಿರೇಮಠರ ಆಯ್ಕೆ ಮಾತ್ರ ಸ್ವಲ್ಪ ವಿವಾದ ತಂದರು ಸಹ ಸಮರ್ಥಿಸಿಕೊಳ್ಳಲಾಯಿತು. ಆ ನೆಲೆಯಿಂದ ಯೋಚಿಸಿದಾಗ ಈ ಸಮ್ಮೇಳನಕ್ಕೆ ಹೈದ್ರಾಬಾದ ಕರ್ನಾಟಕದ ಶಾಂತರಸರೇ ಹೆಚ್ಚು ಸೂಕ್ತ.

ಶಾಂತರಸರು ತಮ್ಮ ರಾಯಚೂರ ಜಿಲ್ಲೆಯಲ್ಲಿ ಸಾಕಷ್ಟು ಜನರನ್ನು ಬೆಳೆಸಿದ್ದಾರೆ. ತಾವು ಬೆಳೆಯುವ ಮೂಲಕ ತಮ್ಮ ಜೊತೆಗಿನವರನ್ನು ಬೆಳೆಸುವ ಪ್ರೋತ್ಸಾಹಿಸುವ ವಿಶಾಲ ಗುಣ ಅವರಲ್ಲಿದೆ. ಹಾಗಾಗಿ ಈ ಹೈದ್ರಾಬಾದ ಕರ್ನಾಟಕದ ನೆಲದಲ್ಲಿ ನಡೆಯುವ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಬೇಕಾದ್ದದು ಅಗತ್ಯವಿದೆ.

---

'ಹೊಸದಿಕ್ಕು'ವಿನ ಮೂರನೇ ಸಂಚಿಕೆಯನ್ನು ನಿಮಗೆ ತಲುಪಿಸಲು ಸಂತೋಷವಾಗುತ್ತಿದೆ, ನಾಡಿನ ಎಲ್ಲಾ ಕಡೆ ಎನ್ನುವದಕಿಂತ ನಮ್ಮ ಸುತ್ತಲ ಜಿಲ್ಲೆಗಳಿಂದ ಹಾಗು ಹಿರಿಯ ಲೇಖಕರು ವಿಮರ್ಶಕರು ಚಂದಾ ಹಣ ಕಳಿಸಿ ಓಲೆ ಬರೆದು ಸಲಹೆ ಸೂಚನೆ ನೀಡಿದ್ದಾರೆ.

ಖ್ಯಾತ ಹಿರಿಯ ಪತ್ರಕರ್ತರು, ಕನ್ನಡ ನಾಡು-ನುಡಿಯ ಬಗ್ಗೆ ಅಪಾರ ಅಭಿಮಾನ ಹೊಂದಿ ಹೋರಾಡುತ್ತಲೇ ಬಂದ ಶ್ರೀ ಪಾಟೀಲ ಪುಟ್ಟಪ್ಪನವರು ತಮ್ಮ ಪ್ರಪಂಚದ 26, ಜುಲೈ 92ರ ಸಂಚಿಕೆಯಲ್ಲಿ 'ನನ್ನ ಹೃದಯದಿಂದ ನಿಮ್ಮ ಹೃದಯಕ್ಕೆ'

ಮಾತುಗಳಲ್ಲಿ ಸಗರ ನಾಡಿನಿಂದ ಬಂದಿರುವ ಸಾಹಿತ್ಯ ಧ್ವನಿ 'ಹೊಸದಿಕ್ಕು' ಎಂಬ ಲೇಖನ ಬರೆಯುವ ಮೂಲಕ ನಮ್ಮ 'ಹೊಸದಿಕ್ಕು'ಗೆ ಒಂದು ಗಟ್ಟಿಯಾದ ನೈತಿಕ ಬಲ ಬರುವ ಹಾಗು ನಮ್ಮಲ್ಲಿ ನಮಗೆ ವಿಶ್ವಾಸ ಮೂಡುವಂತಹ ಮಾತನ್ನಾಡಿದ್ದಾರೆ. ಹೀಗೆ ಡಾ. ಪುರುಷೊತ್ತಮ ಬಿಳೀಮಲೆ ಡಾ, ಅರವಿಂದ ಮಾಲಗತ್ತಿ, ಶ್ರೀ ಆಲೂರ, ಪ್ರೊ. ಹೇಮಾ ಪಟ್ಟಣಶೆಟ್ಟಿ, ಶ್ರೀ ಶೂದ್ರ ಶ್ರೀನಿವಾಸ, ಮುಂತಾದ ಹೆಸರಾಂತ ಲೇಖಕರು ನಮಗೆ ಸಲಹೆ ನೀಡಿ ಉತ್ಸಾಹ ತುಂಬಿದ್ದಾರೆ.

ಒಂದು ಪತ್ರಿಕೆ ಜನಪರವಾಗಿ ಬೆಳೆಯುಬೇಕಾದರೆ ಚಂದಾ ಹಣ ಹಾಗೂ ಲೇಖಕರ ಮತ್ತು ಓದುಗರ ಸ್ಪಂದನವು ಸಹ ತೀರ ಅಗತ್ಯವಾಗಿದೆ. ಹಾಗಿದ್ದರೆ ಮಾತ್ರ ಪತ್ರಿಕೆ ಜೀವಂತಿಕೆಯನ್ನು ಉಳಿಸಿಕೊಳ್ಳಬಲ್ಲದೆಂಬುದು ನನ್ನ ವೈಯಕ್ತಿಕ ಅನಿಸಿಕೆ.

ಸಾಹಿತ್ಯ ಕ್ಷೇತ್ರದಲ್ಲಿ ಏನೇನೂ ಅಲ್ಲದ ನಮ್ಮಂತಹ ಸಾಮಾನ್ಯ ಯುವಕರು ಪತ್ರಿಕೆ ಆರಂಭಿಸಿರುವದು ಹಲವರಿಗೆ ಕುತೂಹಲ ಹುಟ್ಟಿಸಿರಲೂ ಸಾಕು. ಹಾಗಾಗಿ ಇವರೇನು ನಡೆಸಬಲ್ಲರು ಎಂಬ ಅನಿಸಿಕೆಯಿಂದ ಬಹಳ ಜನ ಚಂದಾ ಹಣ ಕಳಿಸಿರಲಿಕ್ಕಿಲ್ಲ. ವೆಂದುಕೊಂಡಿರುವೆ. ಆದರೆ ನಮ್ಮಲ್ಲಿ ನಮಗಂತೂ ಆತ್ಮ ವಿಶ್ವಾಸವಿದೆ. ಪತ್ರಿಕೆ ಕೆಲವಾರು ವರ್ಷಗಳಷ್ಟಾದರೂ ನಡೆಸಿಯೇ ತೀರುತ್ತೇವೆ. ಹಾಗಾಗಿ ಜಾಹಿರಾತು ನೀಡಿದವರು ಚಂದಾ ಹಣ ಕೊಡದವರು ಬೇಗ ಕಳಿಸಿಕೊಡಲು ಕೋರುತ್ತೇವೆ.

## ಪ್ರತಿಕ್ರಿಯೆಗಳು

ಆತ್ಮೀಯರಾದ ಹೊನ್ಕಲ್, ಪುರ್ಲೆ, ಕರದಳ್ಳಿಯವರೆ, ಹೊಸದಿಕ್ಕು ಓದಿದೆ. ಆಶೆ ಮೂಡಿಸಿದೆ; ನಾನು ಹಳೆಯ ದಿಕ್ಕಿನವನೆಂದು ಹೊಸದಿಕ್ಕನ್ನೇನು ಕಡೆಗಣಿಸುತ್ತಿಲ್ಲ, ನನಗೆ ಎರಡೂ ಬೇಕು. ಹಳೆಯ ಒಡಲಿಗೆ ಹೊಸ ಉಡುಪು-ತೊಡಪು ಇನ್ನೂ ಆಕರ್ಷಕ. ನಿಮ್ಮ ಸಾಹಸಕ್ಕೆ ನನ್ನ ಬೆಂಬಲ ಇದ್ದೇ ಇದೆ. ಒಂದು ಮಾತು, ನೀವು ಆರಂಭದಲ್ಲಿಯೇ ದ್ವೈಮಾಸಿಕ ಮಾಡಿದ್ದೀರಿ. ತ್ರೈಮಾಸಿಕವಾಗಿ ಪರಿವರ್ತಿಸಿ ವಾರ್ಷಿಕ ಚಂದಾ ಹಣ ಕಡಿಮೆ ಇಟ್ಟರೆ ಚಂದಾದಾರರ ಬಳಗ ಹೆಚ್ಚೀತು. ಇದು ನನ್ನ ಅನುಭವ. ನಿಮ್ಮ ಅದಮ್ಯ ಉತ್ಸಾಹಕ್ಕೆ ಶುಭ ಕಾಮನೆಗಳು.

—ಸಗರ ಕೃಷ್ಣಾಚಾರ್ಯ

ಪ್ರಿಯ ಮಿತ್ರ ಹೊನ್ಕಲ್, 'ಹೊಸದಿಕ್ಕು' ಶ್ಲಾಘನೀಯ ಪ್ರಯತ್ನ. ಹೊಸದಿಕ್ಕಿನ ಅನ್ವೇಷಣೆ ಈ ಪ್ರವೇಶದಲ್ಲಿ ಅರ್ಥಪೂರ್ಣವಾಗಬೇಕಿದೆ. ನಿಮ್ಮನ್ನು ನೋಡಿದ ಕ್ಷಣವೇ ಅನ್ನಿಸಿತ್ತು. ಈ ವ್ಯಕ್ತಿ ಹೊಸದಾಗಿ ಏನಾದರೂ ಮಾಡಿಯೇ ಮಾಡುತ್ತದೆ

ಅಂತ......ಹೊಸದಿಕ್ಕು ಮಾಡಿಬಿಟ್ಟಿರಿ. ಅಭಿನಂದನೆಗಳು. ಮಿತ್ರ ಕರದಳ್ಳಿಯವರಿಗೆ ಪುರ್ಲೆಯವರಿಗೆ ವಂದನೆ ತಿಳಿಸಿರಿ.

—ಕುಂವಿ

ಮಾನ್ಯರಾದ ಕರದಳ್ಳಿಯವರಿಗೆ, 'ಹೊಸದಿಕ್ಕು'ವಿನ ಎರಡು ಸಂಚಿಕೆ ತಲುಪಿದೆ. ಎರಡು ಸಂಚಿಕೆಗಳು ತೃಪ್ತಿಕರವಾಗಿವೆ. ಇದೇ ಉತ್ಸಾಹವನ್ನು ಕಾಪಾಡಿಕೊಳ್ಳುವೆದು ಕಷ್ಟವಾದೀತು. ನಿಮ್ಮ ಪ್ರಯತ್ನ–ಉತ್ಸಾಹಕ್ಕೆ ನನ್ನ ಬೆಂಬಲ ಇದೆ. ಚಂದಾ ಕಳಿಸಿರುವೆ, ತಲುಪಿದ್ದಕ್ಕೆ ಒಂದು ಸಾಲು ಬರೆಯಿರಿ.

—ಡಾ. ಪುರುಷೋತ್ತಮ ಬಿಳಿಮಲೆ

ಪ್ರಿಯ ಸಂಪಾದಕರೆ, 'ಹೊಸದಿಕ್ಕು' ತಲುಪಿದೆ. ಎರಡು ಸಂಚಿಕೆಗಳನ್ನು ಗಮನಿಸಿದ್ದೇನೆ. ಹೊಗಳಿಕೆಯ ಪತ್ರಗಳಿಗೆ ಮಾರು ಹೋಗಬಿರಿ. ಪತ್ರ ಬರೆಯುವವ ರಿಗೆ ಚಂದಾ ಕಳಿಸುವ ಮನೋಭಾವನೆಯೂ ಇದ್ದರೆ ಒಳಿತು. ಆದರೆ ಅಂಥವರು ಕಡಿಮೆ ಎಂಬುದು ನಿಮಗೀಗಾಗಲೇ ಗಮನಕ್ಕೆ ಬಂದಿರಬಹುದು. ಪತ್ರಗಳಿಗೆ ಉಬ್ಬಿ ಗಾಳಿಯಲ್ಲಿ ತೇಲುವದಕ್ಕಿಂತ ವ್ಯವಹಾರಿಕವಾಗಿಯೂ ನೆಲದೊಂದಿಗೆ ಸಂಬಂಧ ಬೆಳಿಸು ತ್ತೀರಿ ಎಂದು ಬಯಸುವೆ. ಇದು ನಾನು ಕಂಡ ಅನುಭವ.

—ಡಾ. ಅರವಿಂದ ಮಾಲಗತ್ತಿ
ಮಂಗಳಗಂಗೋತ್ರಿ

ಪ್ರಚಾರವೇ ಪ್ರಾಮುಖ್ಯತೆ ಪಡೆದಿರುವ ಈ ಕಾಲದಲ್ಲಿ ನಮ್ಮ ಭಾಗದ ಪ್ರತಿಭೆ ಗಳಿಗೆ ಸೂಕ್ತ ಅವಕಾಶವನ್ನು ಪ್ರಾಮಾಣಿಕ ರೀತಿಯಲ್ಲಿ ಒದಗಿಸುವದಕ್ಕೆ 'ಹೊಸದಿಕ್ಕು' ವಿನಂತಹ ಯೋಗ್ಯ ಸಾಧನವೊಂದರ ಅಗತ್ಯತೆ ಇತ್ತು, ಚಂದಾ ಹಣ ಕಳಿಸುವೆ.

—ಸ್ವಾಮಿರಾವ ಕುಲ್ಕರ್ಣಿ ಗುಲಬರ್ಗಾ

ಪ್ರಿಯ ಮಿತ್ರ ಹೊನ್ಕಲ್, ಕರದಳ್ಳಿಯವರೆ, ಸಂಪಾದಕೀಯ ಹೃದಯಂಗಮ ವಾಗಿದೆ, ನಿಮ್ಮ 'ಕಾಡು' ಕಥೆ ನಮ್ಮ ಬಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿದೆ. ನಮ್ಮ ಊರಲ್ಲಿ ಕುಂತು, ನಡೆದ ಘಟನೆಯನ್ನು ಅನುಭವಿಸಿದಂತೆ ಆಯಿತು. ನೀವು ನಮ್ಮ ಊಹೆಯನ್ನು ಮೀರಿ ಬೆಳೆದಿದ್ದೀರಿ ಅಭಿನಂದನೆಗಳು. ಶ್ರೀ ಪುರ್ಲೆ, ಕರದಳ್ಳಿ ಯವರಿಗೆ ವಂದನೆ ತಿಳಿಸಿ.

—ಈಶ್ವರಯ್ಯ ಮಠ ಗುಲಬರ್ಗಾ

ಪ್ರಿಯ ಹೊನ್ಕಲ್ ತಾವು ಪ್ರೀತಿಯಿಂದ ಕಳಿಸಿದ 'ಹೊಸದಿಕ್ಕು' ನಮ್ಮ ಹೈದ್ರಾಬಾದ ಕರ್ನಾಟಕಕ್ಕೆ ಅತ್ಯಂತ ಅವಶ್ಯಕ ಮತ್ತು ನಾನು ನಿಮ್ಮನ್ನು ದಾವಣಗೆರೆಯ

ಸಮ್ಮೇಳನದಲ್ಲಿ ನೋಡಿದ್ದೆ. ಅಷ್ಟೆ ಅಲ್ಲ, ನಿಮ್ಮ ಕವಿತೆ ಸದಾ ನಿಮ್ಮನ್ನು ನನಗೆ ಹತ್ತಿರವಾಗಿರಿಸಿದೆ ನೀವು ನಿಮ್ಮ ಗೆಳೆಯರು ನಡೆಸುತ್ತಿರುವ ಹೊಸದಿಕ್ಕು ಸಾರ್ಥಕವಾಗಲಿ. ಮುಂದಿನ ತಿಂಗಳು ಚಂದಾಹಣ ಕಳಿಸಿ ನಾನು ಸದಸ್ಯನಾಗುವೆ.

—ಪ್ರಭುದೇವ ಹಾದಿಮನಿ ಕಿನ್ನಾಳ (ರಾಯಚೂರ)

ಪ್ರಿಯರೆ, ಹೈದ್ರಾಬಾದ ಕರ್ನಾಟಕ ಪ್ರದೇಶ ಸದಾ ಬರಗಾಲ ಪೀಡಿತ ಪ್ರದೇಶ ಆದರೂ ನಾವು ಸಾಹಿತ್ಯ ರಂಗದೊಳಗೆ ಹಿಂದಿಲ್ಲಾ ಅಂತ 'ಹೊಸದಿಕ್ಕು' ಮೂಲಕ ತೋರಿಸಿಕೊಡಬೇಕು. ಚಂದಾಹಣ, ಕವನ, ಸಣ್ಣ ಕತೆ ಕಳಿಸುವೆ ವಂದನೆಗಳು ತಮ್ಮವ,

—ಶರಣಪ್ಪ ವಡಿಗೇರಿ ಕುಷ್ಟಗಿ (ರಾಯಚೂರ)

ಪ್ರಿಯರೆ, ನಿಮ್ಮ 'ಹೊಸದಿಕ್ಕು' ನಮ್ಮ ಈ ಭಾಗದ ತರುಣ ಸಾಹಿತಿಗಳಿಗೆ ಹೊಸ ಆಶಾಕಿರಣವಾಗಿ ಬೆಳೆಯುತ್ತಿರುವದು ಸಂತಸ. ಲೇಖನ ಚಂದಾ ಹಣ ಕಳಿಸುತ್ತೇನೆ.

—ಬಿ. ಎಸ್. ದುಂಡರಡ್ಡಿ ಇಲಕಲ್ಲ

ಪ್ರಿಯರೆ, ಆನಂದ ವಿ. ಪಾಟೀಲರು ಜೆ. ಕೆ, ಅವರ ಬಗೆಗೆ ಬರೆದ ಲೇಖನ ತುಂಬಾ ಚೆನ್ನಾಗಿದೆ. ಜೆ. ಕೆ. ಯುವರ Commentries on living I, II, III ಪುಸ್ತಕಗಳನ್ನು ಭಾಷಾಂತರಿಸಿ 'ಹೊಸದಿಕ್ಕು' ಪತ್ರಿಕೆಯಲ್ಲಿ ಧಾರವಾಹಿಯಾಗಿ ಬರೆಯಲು ಆನಂದ ವಿ. ಪಾಟೀಲರನ್ನು ನನ್ನ ಪರವಾಗಿ ಕೇಳಿರಿ. ಅವು ಎಲ್ಲಾ ವೈಚಾರಿಕ ಓದುಗರ ಮನಸ್ಸನು ಸೆರೆಹಿಡಿಯುವದರಲ್ಲಿ ಸಂದೇಹವಿಲ್ಲ. ಇದು ನಿಮ್ಮ ಬದುಕಿನಲ್ಲಿಯೇ ಮಹತ್ತರ ಕೆಲಸವಾಗುತ್ತದೆ,

—ಡಾ. ವಿರುಪಾಕ್ಷಪ್ಪ ಶಿರವಾರ (ರಾಯಚೂರ)

ಪ್ರಿಯ ಹೊನ್ಕಲರಲ್ಲಿ, ಗೆಳೆಯ ಕಾಶಿನಾಥ ಹಂದ್ರಾಳ (ದಾವಣಗೆರೆ) ಅವರಿಂದ ನಿಮ್ಮ ರಸೀದಿ ಪುಸ್ತಕ ದೊರೆತಿದ್ದು ಪತ್ರಿಕೆಗೆ ಚಂದಾದಾರನ್ನಾಗಿಸಿ ಕಳಿಸುತ್ತೇನೆ, ನಾನೀಗ ರಾಯಚೂರ ಜಿಲ್ಲೆಯ 'ಸುದ್ದಿ ಮೂಲ' ಪತ್ರಿಕೆಯ ವರದಿಗಾರನಾಗಿ ಕೆಲಸ ಮಾಡುತ್ತಿರುವದರಿಂದ ಪತ್ರಿಕೆ ನಡೆಸುವ ಕಷ್ಟ ಗೊತ್ತು. ನಮ್ಮ ಭಾಗದ ಕವಿಗಳಿಗೂ ಹೆಚ್ಚಿನ ಅವಕಾಶ ಕೊಡಿ. ಪತ್ರಿಕೆ ಕಳಿಸಿಕೊಡಿರಿ, ರಾಜಕೀಯವಾಗಿ ವಿಚಾರ ತುಂಬುವ ಸಾಹಿತ್ಯದ ಬರಹಗಳು ಬರಲಿ, ಅಂದ್ರೆ ಮಾತ್ರ ಪತ್ರಿಕೆಗೆ ಬಲಬರುತ್ತದೆ.

—ವೀರಪ್ಪ ಜಾಲಾಪುರ ಹುಲಗೇರಿ (ರಾಯಚೂರ)

ಸಂಪಾದಕರಲ್ಲಿ ಕಲ್ಬುರ್ಗಿ ಜಿಲ್ಲೆಯ ವಿಶಿಷ್ಟ ಭಾಷೆಯನ್ನು ಮೈಗೂಡಿಸಿಕೊಂಡು ಬಂದಿರುವ 'ಸಿದ್ಧರಾಮ ಹೊನ್ಕಲ್'ರ ಕಥೆ 'ಕಾಡು' ಭಾಷೆ, ತಂತ್ರ, ಶೈಲಿ, ಹಾಗೂ

ಕಥೆಯಲ್ಲಿ ಬರುವ ನೈಜ ಚಿತ್ರಣದಿಂದ ಮನಗೆಲ್ಲುವಲ್ಲಿ ಯಶಸ್ವಿಯಾಗಿದೆ. ಆದರೆ ನಾಡಿನ ಖ್ಯಾತ ದಿನಪತ್ರಿಕೆ– ಪ್ರಜಾವಾಣಿಯಲ್ಲಿ ಪ್ರಕಟಿತಗೊಂಡ ಕೆಲವೇ ದಿನಗಳಲ್ಲಿ ನಮ್ಮ 'ಹೊಸದಿಕ್ಕು'ವಿನಲ್ಲಿ ಪ್ರಕಟಗೊಂಡಿರುವುದು ತೀರಾ ಬೇಸರದ ವಿಚಾರ ದಯವಿಟ್ಟು ಮುಂದೆ ಹೀಗಾಗದಂತೆ ನೋಡಿಕೊಳ್ಳಿ.

—ದೇವು ಪತ್ತಾರ ಕಲ್ಬುರ್ಗಿ

ಪ್ರಿಯ ಸಂಪಾದಕರಲ್ಲಿ ನಿಮ್ಮ 'ಹೊಸದಿಕ್ಕು' ಇಲ್ಲಿ ಎಲ್ಲರಿಗೂ ಬಂದು ತಲುಪುತ್ತಿವೆ. ನಾಡಿನ ಎಲ್ಲಾ ಕಡೆ ಪತ್ರಿಕೆ ಬಗ್ಗೆ ಒಳ್ಳೆ ಅಭಿಪ್ರಾಯ ಬಂದದ್ದು ನೋಡಿ ಸಂತೋಷವಾಯಿತು. ಈ ಓಲೆಯ ಜೊತೆಗಿರುವ ವಿಳಾಸದಾರರಿಗೂ ಪತ್ರಿಕೆ ಕಳಿಸಿರಿ. ನಮ್ಮ ಕಡೆ ಮಿತ್ರರು ಕವನ ಲೇಖನ ಇತ್ಯಾದಿ ಕಳಿಸಿದರೆ ದಯವಿಟ್ಟು ಪ್ರಕಟಿಸಿ ಅವಕಾಶ ಕೊಡಿರಿ. ಎಲ್ಲಾ ಬಳಗಕ್ಕೂ ವಂದನೆಗಳು

—ಶಿವಯೋಗಿ ಹತ್ತಿ ಗೋಲಗೇರಿ (ಬಿಜಾಪುರ)

ಪ್ರೀತಿಯ ಹೊನ್ನಲ್ ನೀರಿಲ್ಲದ ನೆಲದಲ್ಲಿ ಬೆಳೆ ತೆಗಿಯುವ ಸಾಹಸಕ್ಕೆ ತೊಡಗಿದ್ದೀರಿ. ಪತ್ರಿಕೆ ವೈವಿಧ್ಯಮಯವಾಗಿ ಬರತೊಡಗಿದೆ. ಹೊಸದಿಕ್ಕಿಗೆ ಏನಾದರೂ ಕಳಿಸುತ್ತೇನೆ ಸ್ನೇಹಿತರಿಗೂ ಹೇಳುತ್ತೇನೆ ಅಭಿನಂದನೆಗಳು.

—ಹೇಮಾ ಪಟ್ಟಣಶೆಟ್ಟಿ ಧಾರವಾಡ

ಪ್ರಿಯರೆ, ಹೊಸದಿಕ್ಕು ತಲುಪಿದೆ, 'ಶೂದ್ರ'ದಲ್ಲಿ ಬರೆಯುವೆ. ನಿಮ್ಮ ನಾಡಿನ ಸೀರಿನ ತಾಪ ಹೇಗಿದೆ ? 'ಕಾಡು' ಓದಿದೆ ತುಂಬಾ ಚೆನ್ನಾಗಿದೆ.

—ಶೂದ್ರಶ್ರೀನಿವಾಸ ಬೆಂಗಳೂರ

ಪ್ರಿಯ ಹೊನ್ನಲ್ ಹೊಸದಿಕ್ಕು ತಲುಪಿತು. ನಿಮ್ಮ ಉತ್ಸಾಹ, ಲವಲವಿಕೆ, Sincerty ಯನ್ನು ಅದು ತೋರುತ್ತಿದೆ. ಈ ದಿಕ್ಕಿನಲ್ಲಿ ನಿಮಗೆ ಯಶ ಸಿಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

—ಚಂದ್ರಶೇಖರ ಆಲೂರು ಬೆಂಗಳೂರು

(ನಾಡಿನ ಎಲ್ಲಾ ಭಾಗದ ಲೇಖಕರು, ಯುವ ಲೇಖಕರು, ಪತ್ರಿಕೆಗೆ ನಿಮ್ಮ ಬರಹಗಳನ್ನು ಕಳಿಸಿಕೊಡಿ.

● ಸಂಪಾದಕ

# ಗಜಲ್

ಸತ್ತರೂ ಬರಲಿಲ್ಲ ಫಲವೇನು ಕೇಳಿದರೆ ಬಿಡು ಬದುಕು ಅರ್ಥವಾಗಿಲ್ಲ
ಪ್ರೇಮ ಸಾಯುವದಲ್ಲ ಸಾಯುವುದಿಲ್ಲ ಸಾವು ಸಹ ನಿಜಕು ಅರ್ಥವಾಗಿಲ್ಲ

ನಾಶವಾಗುವುದೆಲ್ಲ ಶಾಶ್ವತದ ಪಟ್ಟವಿಲ್ಲ ಯಾವುದಕೂ ಇಲ್ಲ ಎಂಬ
ಈ ವೇದಾಂತ ಭಾವವಳಿಸಲು ನಿಮಿಷದ ತೋಷ ಸಾಕು ಅರ್ಥವಾಗಿಲ್ಲ

ವ್ಯಾಪಿಸಿವೆ ತಿರೆ ಬಾನು ಸಕಲ ವಿಶ್ವಗಳ ಒಂದಿನಿತೂ ಸ್ಥಳ ಬಿಡದೆ ಸಾವು
ಅದರ ಉಸಿರಾಟ ಆಹಾರವೆಲ್ಲಕ್ಕೂ ಬದುಕೇ ಬೇಕು ಅರ್ಥವಾಗಿಲ್ಲ

ಅದು ಇದು ಅವರಿವರು ಅರಿಯದೆಯೆ ಪ್ರೇಮವನು ಕಂಗೆಟ್ಟು ಹೆಸರಳಿಸಿ ಹೋದರು
ಉರಿವ ವಿರಹಿಯೆದೆಯಲಿ ಕಮ್ಮಗೆ ಹರಡಿದೆಯದರ ಚೆಂಬೆಳಕು ಅರ್ಥವಾಗಿಲ್ಲ

ಕಣ್ಣು ಮನ ನಮ್ಮವಾಗದೆ ಅರಸ ನಮ್ಮವಾದುವು ದುಃಖದುಮ್ಮಾನ ದುರಿತ
ವ್ಯರ್ಥ ನಿಂದಿಸಿ ಹೊಗಳಿ ಸಣ್ಣಾಗಿ ಮಣ್ಣು ಕಂಡಿತು ಬದುಕು ಅರ್ಥವಾಗಿಲ್ಲ

● ಶಾಂತರಸ

---

# ಸಾವು ಮತ್ತು ಶಕುನಿ

ಸಾವು ಮತ್ತು ಶಕುನಿ
ಒಂದೇ ಮುಖದ ಎರಡು ನಾಣ್ಯಗಳು
ಹತ್ತಿರವಿದ್ದು ಕೊಲ್ಲುವ
ರಕ್ತ ಸಂಬಂಧಿಗಳು

## ಸಾಮ್ಯ

ಕೃಷ್ಣೆಯ ಆರ್ಯರು
ರೇಣುಕೆಯ ಅಗ್ನಿ
ರೇಣುಕೆಯ ಕಾಮಣ್ಣ
ಕೃಷ್ಣೆಯ ಕರ್ಣ

—ಬಸು ಬೇವಿನಗಿಡದ

# ಕನ್ನಡಿಗರೇಕೆ ಬಡವರಾದರು

ಒಮ್ಮೊಮ್ಮೆ ವಿಚಾರ ಮಾಡಿದಾಗ ಬೇರೆ ರಾಜ್ಯಗಳಿಗೆ ಹೋಲಿಸಿದರೆ ಕನ್ನಡಿಗರು ಏಕೆ ಬಡವರಾದರು ? ಎಂಬ ಪ್ರಶ್ನೆ ಕಾಡುತ್ತದೆ. ನೆರೆಯ ಆಂಧ್ರ ತಮಿಳುನಾಡುಗಳಲ್ಲಿ ದೊಡ್ಡ ದೊಡ್ಡ ಜಮೀನುದಾರರಿದ್ದಾರೆ. ಈ ಕಡೆ ಮಹಾರಾಷ್ಟ್ರ ಗುಜರಾತಗಳಲ್ಲಿ ದೊಡ್ಡ ಉದ್ಯೋಗಪತಿಗಳಿದ್ದಾರೆ. ಆದರೆ ಕರ್ಣಾಟಕದಲ್ಲಿ ಇಂಥ ಶ್ರೀಮಂತ ಕುಟುಂಬಗಳನ್ನು ಏಕೆ ಕಾಣಲಾಗುತ್ತಿಲ್ಲ ? ಇದಕ್ಕೆ ಉತ್ತರ ಯಾರು ಹೇಳಬಲ್ಲರು. ಹಾಗೆ ನೋಡಿದರೆ ಕರ್ಣಾಟಕವೇನೂ ಬಂಜರು ಜಮೀನಲ್ಲ, ಮರುಭೂಮಿ ಮೈದಾನವಲ್ಲ. ಕಲ್ಲು ಮುಳ್ಳುಗಳ ಕಾಡು ಪ್ರದೇಶವೂ ಅಲ್ಲ, ಕರ್ನಾಟಕದಲ್ಲಿರುವಷ್ಟು ನೆಲ ಸಂಪತ್ತು, ಜಲ ಸಂಪತ್ತು, ವನ ಸಂಪತ್ತು, ಖನಿಜ ಸಂಪತ್ತು ಬೇರೆಲ್ಲಿಯೂ ಇಲ್ಲ. ಇಷ್ಟಿದ್ದರೂ ನಮ್ಮ ಜನ ಬಡತನಕ್ಕೇನೇ ಏಕೆ ಒಲಿದರು, ಶ್ರೀಮಂತಿಕೆಯನ್ನು ಏಕೆ ತಿರಸ್ಕರಿಸಿದರು ಎಂಬ ಪ್ರಶ್ನೆಗಳು ಬಾಧಿಸದೆ ಇರುವುದಿಲ್ಲ.

ಬಹುಶಃ ಕರ್ನಾಟಕ ಆಧ್ಯಾತ್ಮಿಕ ಆಡುಂಬೊಲವಾಗಿರುವುದರಿಂದ ನಶ್ವರವಾದ ಧನಕನಕಗಳ ಬಗ್ಗೆ ಕನ್ನಡಿಗರು ನಿರಪೇಕ್ಷೆ ತಾಳಿದ್ದಿರಬಹುದೆನಿಸುತ್ತದೆ. ಧರ್ಮಿಷ್ಠರಾದವರೆಂದೂ ಜಿಪುಣರಾಗಿರುವುದಿಲ್ಲ, ಜಿಪುಣರಲ್ಲದವರು ಶ್ರೀಮಂತರಾಗುವುದಿಲ್ಲ. ಆದಕ್ಕೆಂದೇ ಧರ್ಮ ಭೀರುಗಳಾದ ಕನ್ನಡಿಗರು ನಿರ್ಧನಿಕರಾಗಿ ಉಳಿದಿರಬೇಕು. ಬೌದ್ಧ ಧರ್ಮ ಕರ್ಣಾಟಕದಲ್ಲಿ ಚೆನ್ನಾಗಿ ಬೇರೂರಿತ್ತೆನ್ನುವುದಕ್ಕೆ ಸನ್ನತಿ, ಮಸ್ಕಿ, ಬ್ರಹ್ಮಗಿರಿ ಅವಶೇಷಗಳು ಸಾಕ್ಷಿಯಾಗಿವೆ. ಬೌದ್ಧ ಧರ್ಮ ಪರೋಪಕಾರವನ್ನೇ ಬೋಧಿಸುತ್ತದೆ. ಜೈನ ಧರ್ಮದ ತೂಗು ತೊಟ್ಟಿಲು ಕರ್ಣಾಟಕ. ಗೊಮ್ಮಟೇಶ್ವರನೇ ಎಲ್ಲವನ್ನು ತೊರೆದು ನಿಂತಾಗ ಕನ್ನಡಿಗರು ಐಹಿಕಕ್ಕೆ ಹೇಗೆ ಮಹತ್ವ ಕೊಟ್ಟಾರು? ದ್ವೈತ, ಅದ್ವೈತ. ವಿಶಿಷ್ಟಾದ್ವೈತ, ವೀರಶೈವರ ಶಕ್ತಿ ವಿಶಿಷ್ಟಾದ್ವೈತ ಎಲ್ಲವೂ ಇಲ್ಲಿಯೆಂದರೆ ಕರ್ನಾಟಕದಲ್ಲಿ ಉಚ್ಛ್ರಾಯ ಸ್ಥಿತಿ ಹೊಂದಿದವು. ಅದ್ವೈತ ಮತದ ಶಂಕರಾಚಾರ್ಯರು ಕೇರಳದವರಾದರೂ ತಮ್ಮ ಮೊದಲ ಪೀಠ ಕರ್ಣಾಟಕದ ಶೃಂಗೇರಿಯಲ್ಲಿ ಸ್ಥಾಪಿಸಿದರು. ಅದ್ವೈತ ಮತದ ಮಧ್ವಾಚಾರ್ಯರಂತೂ ಕನ್ನಡಿಗರು ಕರ್ಣಾಟಕದ ಉಡುಪಿಯಲ್ಲಿಯೇ ನೆಲೆನಿಂತವರು. ವಿಶಿಷ್ಟಾದ್ವೈತ ಮತದ ರಾಮಾನುಜಾಚಾರ್ಯರು ತಮಿಳು ನಾಡಿನಲ್ಲಿ ಹುಟ್ಟಿದ್ದೂ ಕರ್ಣಾಟಕ ಮೇಲುಕೋಟೆ

ಯಲ್ಲಿ ಆಶ್ರಯ ಪಡೆದು ತಮ್ಮ ತತ್ವ ಪ್ರಚಾರ ಮಾಡಿದರು. ಬಸವಣ್ಣನವರಂತೂ ಅಚ್ಚ ಕನ್ನಡಿಗರು. ಹುಟ್ಟಿದುದು ಬಾಳಿದುದು ನಿರ್ವಾಣ ಹೊಂದಿದುದು ಎಲ್ಲವೂ ಕರ್ಣಾಟಕದಲ್ಲಿಯೇ. ಅವರು ಬೋಧಿಸಿದುದೂ ಕನ್ನಡದಲ್ಲಿಯೇ ಹೀಗಾಗಿ ಕರ್ಣಾಟಕ ಧರ್ಮಿಷ್ಟರ ಧಾರ್ಮಿಕ ನಾಡು.

ಇನ್ನು ಎರಡನೆಯದಾಗಿ ಕನ್ನಡ ಕವಿಗಳ ಶ್ರೀಮಂತಿಕೆ ಭರ್ತ್ಸನೆಯೂ ಕನ್ನಡಿಗರು ಶ್ರೀಮಂತಿಕೆಯಿಂದ ದೂರವಿರಲು ಪ್ರೇರಣಾತ್ಮಕವಾಗಿರಬೇಕು. ಅನೇಕ ಕನ್ನಡ ಕವಿಗಳು ಸಂದರ್ಭ ಸಿಕ್ಕಾಗಲೆಲ್ಲ ಶ್ರೀಮಂತರನ್ನು ಮತ್ತು ಶ್ರೀ ಮಂತಿಕೆಯನ್ನು ಚೆನ್ನಾಗಿ ಹೀಗಳೆದಿದ್ದಾರೆ. ಶ್ರೀಮಂತಿಕೆಯ ಪೋಷಕರಾದ ಅರಸರೆಂದರೂ ಅವರಿಗೆ ತಾತ್ಸಾರವೇ, ಆದಿಕವಿ ಪಂಪನು ಒಂದು ಪದ್ಯದಲ್ಲಿ ಅರಸರನ್ನು ಹೀಗೆ ತೆಗಳಿದ್ದಾನೆ.

ಕಲಿಯುನೆ ಪಂದೆ ಮಾಳ್ಪ, ಕಡು ಪಂದೆಯನೊಳ್ಗಲಿ ಮಾಳ್ಪ,
ತಕ್ಕನಂ ಪೊಲೆಯನೆ ಮಾಳ್ಪ, ಮುಂಪೊಲೆಯನಂ ನೆರೆತಕ್ಕನೆ ಮಾಳ್ಪ
ತಮ್ಮೊಳಗ್ಗಲಿಸಿ ಪೊದಳ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಂ
ಅದರಿಂದಮ್ ಓಲಗಿಸಿ ಬಾಳ್ವುದೆ ಕಷ್ಟಮ್ ಇಳಾಧಿನಾಥರಂ,

ಹಾಗೆ ನೋಡಿದರೆ ಪಂಪ ಅರಿಕೇಸರಿ ಮಹಾರಾಜನ ಆಸ್ಥಾನದಲ್ಲಿ ಆಶ್ರಯ ಪಡೆದವನು ಆದರೂ ಅರಸರು ಅವಿವೇಕಿಗಳಾಗಿರುತ್ತಾರೆಯೆಂದು ಹೇಳಲು ಆತ ಹಿಂಜರಿಯುತ್ತಿಲ್ಲ. ಏಕೆಂದರೆ ಅರಸರ ಗುಣವೇ ಅಂಥದು. ವೀರರನ್ನು ಹೇಡಿಗಳನ್ನಾಗಿ ಜರಿಯುತ್ತಾರೆ, ಹೇಡಿಗಳನ್ನು ಮಹಾವೀರನನ್ನಾಗಿ ಸಂಬೋಧಿಸುತ್ತಾರೆ. ಅಯೋಗ್ಯರನ್ನು ಯೋಗ್ಯರೆನ್ನುತ್ತಾರೆ, ಇದಕ್ಕೆಲ್ಲ ಅವರ ಮದಾಂಧತೆಯೇ ಕಾರಣ ಇದೇ ರೀತಿ ಬಸವಣ್ಣನವರು ಸಹಿತ ಬಿಜ್ಜಳನಲ್ಲಿ ಮಂತ್ರಿಯಾಗಿದ್ದರೂ "ಅರಸು ವಿಚಾರ ಸಿರಿಯ ಶೃಂಗಾರ ಸ್ಥಿರವಲ್ಲ ಮಾನವಾ" ಎಂದು ಅರಸರ ವಿಚಾರಗಳು ಚಂಚಲವಾದವುಗಳೆಂಬುದನ್ನು ಬೋಧಿಸಿದ್ದಾರೆ.

ಕವಿ ಚಕ್ರವರ್ತಿ ರನ್ನನಿಗಂತೂ ಶ್ರೀಮಂತರೆಂದರೆ ಸಿಟ್ಟು, ಶ್ರೀಮಂತಿಕೆಯ ಲಕ್ಷ್ಮಿಯೆಂದರೆ ಎಲ್ಲಿಲ್ಲದ ಅರ್ಭಟ. ಎಲೆ ಲಕ್ಷ್ಮಿ ನಿನಗಿಂತ ಕನಿಷ್ಟರು ಯಾರಿದ್ದಾರೆ ಎಂದು ಎಷ್ಟೆಷ್ಟು ಪದ್ಯಗಳಲ್ಲಿ ನಿಂದಿಸಿದ್ದಾನೆ ಗಮನಿಸಿ,

ಕಲಿಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ

ತರುಣಂಸಲೆ ವೃದ್ಧನೆಂದು ಬಗೆಯದೆ ನೆಲೆಸುವೆ
ನಿನ್ನಿಂ ನಿಕೃಷ್ಟರುಂ ಒಳರೇ ?
ಇರಿಯಿಸುವ ತಂದೆ ಮಕ್ಕಳ
ಇರಿಯಿಸುವಯ್ ಸೋದರರ್ಕಳಂ
ತತ್ತಿರಿಯಿಸುವಯ್ ಗುರು ಶಿಷ್ಯರ
ಎಲೆ ಲಕ್ಷ್ಮಿ ನಿನ್ನಿಂ ನಿಕೃಷ್ಟರೆಂಬವರ್ ಒಳರೇ ?
ಪೊಡೆವಡೆ ಪರಸದೆ, ಬಿನ್ನವಿಪೆಡೆ ಕೇಳದೆ
ಮುಂದೆ ನಿಂದರುಂ ಕಾಣದೆ, ತಕ್ಕಡೆಯೊಳ್ ಕಡೆಗಣಿಸುವ
ನೃಪವಿಡಂಬಂ ಇವು ಲಕ್ಷ್ಮಿ ನಿನ್ನ ದೂಸರಿಂದಂ ಅಲ್ತೆ ?
ಗುಣಿಗಳ ನೆರೆಪೊರ್ದದೆ ನಿರ್ಗುಣರಂ ಪೊರ್ದುವೆ
ವಿಶಿಷ್ಟರಂ ದುಷ್ಟರೊಳಂ ಗಣಿಯಿಸಿಸಮವೆಂಬ
ಅವಗುಣಗಣಂಗಳಿವು ಲಕ್ಷ್ಮಿ ನಿನ್ನ ದೂಸರಿಂದಂ ಅಲ್ತೆ ?

ಬಹುಶಃ ರನ್ನ ಕವಿಯು ವರ್ಣಿಸಿದ ಈ ಲಕ್ಷ್ಮಿಯ ಚಾಂಚಲ್ಯತೆಯನ್ನು ಮನಗಂಡೇ ಶ್ರೀಮಂತಳಾಗಿದ್ದ ಅತ್ತಿಮಬ್ಬೆ ಹಣವನ್ನೆಲ್ಲ ಬಡವರಿಗೆ ಹಂಚಿ, ಧನವನ್ನೆಲ್ಲ ಧರ್ಮಕಾರ್ಯಕ್ಕೆ ವಿನಿಯೋಗಿಸಿ ಆಸ್ತಿ ಪಾಸ್ತಿಯನ್ನು ಕವಿ ಸಾಹಿತಿಗಳಿಗೆ ಪ್ರೋತ್ಸಾಹವನ್ನಾಗಿ ನೀಡಿ ದಾನ ಚಿಂತಾಮಣಿ ಅತ್ತಿಮಬ್ಬೆ ಎಂದು ಕರೆಯಿಸಿಕೊಂಡಿರಬೇಕು. ಅತ್ತಿಮಬ್ಬೆ ರನ್ನಕವಿಯ ಅಜಿತನಾಥ ಪುರಾಣದ ಸಾವಿರ ಪ್ರತಿಗಳನ್ನು ಮಾಡಿಸಿ ಉಚಿತವಾಗಿ ಹಂಚಿದಳೆಂಬುದು ಈಗಲೂ ದಾಖಲೆಯಾಗಿ ಉಳಿದಿದೆ,

ಇದೇ ರೀತಿ ನಾಗಚಂದ್ರಕವಿಯೂ ಲಕ್ಷ್ಮಿಯ ಚಾಂಚಲ್ಯ ಗುಣವನ್ನು ಪರಿಪರಿಯಾಗಿ ಬಣ್ಣಿಸಿದ್ದಾನೆ. ಆತನ ಒಂದು ತರ್ಕ ಬಹಳ ಸ್ವಾರಸ್ಯಕರವಾಗಿದೆ. ಲಕ್ಷ್ಮಿಯು ಒಂದು ಜಾಗದಲ್ಲಿ ನಿಲ್ಲದೆ ಏಕೆ ತಿರುಗುತ್ತಾಳೆಯೆಂದರೆ ಮಂದರ ಪರ್ವತ ಕಡೆಗೋಲಾಗಿ ಸಮುದ್ರ ತಿರುಗುತ್ತಿರುವಾಗ ಹುಟ್ಟಿನುದರಿಂದ ಆ ಚಲನಗುಣ ಹಾಗೆಯೇ ಉಳಿದುಕೊಂಡಿದೆ.

ವಾರಿಧಿಯೊಳ್ ಮಂದರಗಿರಿ
ಭೋರನ ತಿರುಗುತ್ತಿರಲ್ಕೆ ಪುಟ್ಟಿದ ಬಹು ಸಂಸ್ಕಾರಂ
ಆದಿನ್ನುಂ ಬಿಡದವೋಲ್ ಓರಂತಿರೆ ನೋಡೆ ಲಕ್ಷ್ಮಿ ತಿರ್ರನೆ ತಿರುಪಳ್

ಹೀಗೆ ಕನ್ನಡದ ಮಹಾನ್‌ಮಹಾನ್ ಕವಿಗಳು ಶ್ರೀಮಂತರ ಬಗ್ಗೆ ತಿರಸ್ಕಾರ ವ್ಯಕ್ತಪಡಿಸಿದುದರಿಂದ ಆದರ ಬಗ್ಗೆ ಕನ್ನಡಿಗರಿಗೆ ವ್ಯಾಮೋಹ ಹೋಗಿರಬಹುದೇ ?

ಜೊತೆಗೆ ಶಿವಶರಣರು ಮತ್ತು ಹರಿದಾಸರು ಕೂಡ ಹಣದ ನಶ್ವರತೆಯನ್ನೇ ಒತ್ತಿ ಹೇಳಿದರು.

'ನಂಟರ ಇಷ್ಟರ ಮರೆಸೋದು ರೊಕ್ಕ, ಕಂಟಕ ನೋವನು ಬರಿಸೋದು ರೊಕ್ಕ
ಗಂಟು ಕಟ್ಟಲಿಕೆ ಕಲಿಸೋದು ರೊಕ್ಕ, ತುಂಟತನಗಳ ಒಲಿಸೋದು ರೊಕ್ಕ
ರೊಕ್ಕ ಎರಡಕ್ಕು ದುಃಖ ಕಾಣಕ್ಕ ಎಂದು ಪುರಂದರದಾಸರು ಹಾಡಿದರೆ
ಹಣವೆ ನಿನ್ನಯ ಗುಣವನೇನು ಬಣ್ಣಿಪೆನೊ
ಬೆಲೆಯಾಗದವನೆಲ್ಲ ಬೆಲೆಯ ಮಾಡಿಸುವಿ ಎಲ್ಲ ವಸ್ತುಗಳನಿದ್ದಲ್ಲೆ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ, ಹೊಲೆಯನಾದರೂ ತಂದು ಒಳಗೆ ಇರಿಸುವಿ
ಎಂದು ವಾದಿರಾಜರು ವ್ಯಾಜಸ್ತುತಿ ಮಾಡಿದ್ದಾರೆ.
ಹಾವತಿಂದವರ ನುಡಿಸಬಹುದು, ಗರವ ಹೊಡೆದವರ ನುಡಿಸಬಹುದು
ಸಿರಿಗರವ ಹೊಡೆದವರ ನುಡಿಸಲಾಗದಯ್ಯಾ

ಬಡತನವೆಂಬ ಮಂತ್ರವಾದಿ ಹೋಗಲು ತಾವೇ ನುಡಿವರಯ್ಯಾ ಕೂಡಲಸಂಗಮ ದೇವಾ ಎಂದು ಬಸವಣ್ಣನವರು ಹೀಗಳೆದಿದ್ದಾರೆ. ಈ ಎಲ್ಲ ವಚನಗಳು ಕನ್ನಡಿಗರ ಮೇಲೆ ಪರಿಣಾಮ ಬೀರಿರಬಹುದೆ?

---

## ನಂತರ

ಹೂವು ಸುಂದರವೆಂದು
ವನ ರಮ್ಯವೆಂದು
ನಿಸರ್ಗ ಚೇತೋಹಾರಿಯೆಂದು
ಕಂಡಿದ್ದ ಅವನು
ನಂತರ ಅದು
ಮುಳ್ಳಿನ ಹಂದರವೆಂದು
ಭೀಕರ ತಾಣವೆಂದು
ಪ್ರತೀಕಾರದ ಕೇಂದ್ರವೆಂದು
ಕಂಡುಕೊಂಡ

—ಬಸು ಬೇವಿನಗಿಡದ

# ಕುಂತಿಮಗನೆಂದು ಬಂದಾಗ ಡಪ್ಪಿನಾಟದಲ್ಲಿ ಕರ್ಣನ ಹಾಡು

-೧-

ಧಿತ್ತಯ್ಯ ಥಕ್ಕ ಧಿತ್ಯಯ್ಯ ಥಕ್ಕ ಧಿತ್ಯಯ್ಯ ಥಕ್ಕ ತಾ
ಥೈಯಯ್ಯ ಥಕ್ಕ ಥೈಯಕ್ಕ ಥಕ್ಕ ಥೈಯಕ್ಕ ಥಕ್ಕ ತಾ
ಹ್ಯಾಂಗ ಹೇಳಾಲೆ ಎವ್ವಾ । ಹ್ಯಾಂಗ್ ಹೇಳಾಲೆ
ನನ್ನ ಇದ್ದಲು ಬಾಳು ಬಂಗಾರಾಯ್ತು ಮಗನೆಂದುದಕ ।ಪಲ್ಲ।

-೨-

ನನ್ನ ಕುಲಕ್ಕೀಗ ಬಲಬಂತು ನಿನ್ನಿಂದ್ಾಾಯಿಽ
ನನ್ನ ಛಲಕ್ಕೀಗ ನೆಲೆಬಂತು ನಿನ್ನಿಂದ್ಾಾಯಿಽ
ನನ್ನ ರಕ್ತಕೀಗ ಅರ್ಥಬಂತು ನಿನ್ನಿಂದ್ಾಾಯಿಽ
ನನ್ನ ತ್ಯಾಗಕ್ಕೀಗ । ಬೆಲೆಬಂತು ನಿನ್ನಿಂದ್ಾಾಯಿಽ

-೩-

ನಾನು ಇಲ್ಲಿತನಕೇನಿದ್ರು ಇಲ್ದಂಗಿದ್ದೆಽ
ತಂದೆ ತಾಯಿಯು ಗೊತ್ತಿಲ್ದೆ ಸತ್ತಂಗಿದ್ದೆಽ
ಸೂತಪುತ್ರನೆನಸಿಕೊಂಡು ಹುಳವಾಗಿದ್ದೆಽ
ಮಿೂನುಗಾರರ । ಮಗನಾಗಿ ಮಣ್ಣಾಗಿದ್ದೆಽ

-೪-

ಜೀವ ಇವತ್ತಿಲ್ಲ ನಾಳಿಗಾದ್ರು ಹೋಗ್ತಾದವ್ವಾಽ
ದ್ಯಾಯ ಇವತ್ತಿಲ್ಲ ನಾಳಿಗಾದ್ರು ಅಳಿತಾದವ್ವಾಽ
ಕೀರ್ತಿ ಉಳಿಲಾಕ ನಾನು ಇಲ್ಲಿ ಸಾಯ್ತಿನವ್ವಾಽ
ತಾಯಿ ಆದುದಕ । ನಿನ್ನ ಮಾತು ನಡ್ಸತಿನೆವ್ವಾಽ

-೫-

ನಾನು ಪಟ್ಟಕಷ್ಟ ಯಾರಿಗ್ಹೇಳಲಿ ಒಂದೊಂದವ್ವಾಽ
ನಾನೆಲ್ಲಿ ಹೋದ್ರು ಜಾತಿಲಿಂದ ನೋಡ್ಯಾರವ್ವಾಽ

ನನ್ನ ಶೌರ್ಯ ಸಾಹಸ ಮಣ್ಣಾಗ್ಹಾಕಿ ತುಳ್ದಾರವ್ವಾಽ
ನಾನು ಮನುಷ್ಯನೆಂಬುದೆ ಲೆಕ್ಕ ಇಟ್ಟಿಲ್ಲವ್ವಾಽ

-೬-

ನಿನ್ನ ಮಕ್ಕಳಕಡೇವ್ರ ಮಾಡಿದ್ದು ಕೇಳ್ತೆನವ್ವಾಽ
ನಾನು ನೀಚ್‌ಜಾತ್ಯವನೆಂದು ಹಳ್ದಾರ ಸಿಕ್ಕಲ್ಲೆವ್ವಾಽ
ಅದ್ಕ ದುರಿಯೋಧನ ರಾಜ ನನ್ಗ ಹಿಡ್ಕೊಂಡ್ನವ್ವಾ
ಅಂಗದೇಶದ । ರಾಜನಾಗಿ ಮಾಡಿದ್ನವ್ವಾಽ

-೭-

ನನಗಾದಂಥ ಬ್ಯಾನಿಯು ಎನ್ಹೇಳ್ಲೆವ್ವಾಽ
ಕಣ್ಣು ಕಿವಿ ಮೂಗು ಮೈಯ್ಗ್ಯಾಯಾ ಮಾಡ್ಯಾರವ್ವಾಽ
ಮನಸು ತಲಿಬಾಯಿ ಎದಿತುಂಬ ಚುಚ್ಯಾರವ್ವಾಽ
ನನ್ಗ ಹಾಕ್ಯಾಕಿ । ಹೊಡದಾರ ಮಾತ್ನ್ಯಾಗೆವ್ವಾಽ

-೮-

ಅದ್ಕ ದುರಿಯೋಧನ ರಾಜನಲ್ಲೆ ಸಾಯಿನವ್ವಾಽ
ಅವ್ನ ಅನ್ನದ ರಿಣಕ್ಕಲ್ಲೆ ಉಳ್ತೆನವ್ವಾಽ
ಮೊನ್ಗಾರೆರ ಮಗನಾಗಿ ಬಿಟ್ಟಿಲ್ಲವ್ವಾಽ
ಇನ್ನು ನಿನ್ನಮಗ । ಆದಾಗ್ಯಾಂಗ ಬಿಡ್ತೆನವ್ವಾಽ

-೯-

ಎಂಥ ನೀಚರು ಹಾರ್ತ್ಯಾಯಿ ಪ್ಯಾಟಿನೋರುಽ
ಜಾತಿಹೆಸ್ರನ್ಯಾಗ ದೇಶ ಹಾಳ್ಮಾಡ್ತಾರವರುಽ
ಸೂರ್ಯನ ಮಗನಾದ್ರು ನನಗ್ಹೀಂಗ ತುಳ್ದಾರವ್ರುಽ
ಉಳ್ದ ಬಡುವರ ' ಮಕ್ಳಗ್ಯಾಂಗ ಬಿಡ್ತಾರವ್ರುಽ

-೧೦-

ಅದಕ್ಕಾಗಿಯೇ ಈದೇಶ ನೆಳ್ಗತ್ತಾದ್ತಾಯಿಽ
ರಕ್ತರವ ಮಂಡಲದಾಗ ಮುಳ್ಗಿ ಹೋಗ್ಯಾದ್ತಾಯಿ
ಹೊಟ್ಟಿಕಿಚ್ಚಿನಾಗ್ಸುಟ್ಟು ಸತ್ತಾದ್ತಾಯಿಽ
ದೇಶ ಉಳಸಾಕ । ಬೇಕಿಲ್ಲಿ ಮಹಾತ್ತಾಯಿಽ

**ಚೆನ್ನಣ್ಣ ವಾಲೀಕಾರ**

# ಯೋಚಿಸದಿರು

ನ್ಯಾಯಕ್ಕಿಲ್ಲ ಇಲ್ಲಿ ಸಾಕ್ಷಿಯ ಕಿಮ್ಮತ್ತು
ಧರ್ಮಕ್ಕಿಲ್ಲ ಕವಡೆಯ ಕಿಮ್ಮತ್ತು
ಶಿಕ್ಷಣಕ್ಕಿಲ್ಲ ಎಳ್ಳುಕಾಳಿನ ಕಿಮ್ಮತ್ತು
ಹೀಂಗಿದ್ದಾಗ ಚಿಂತಿ ಮಾಡಬೇಡಾ ಗೆಳೆಯಾ
ಧೈರ್ಯದಿಂದ ಮುನ್ನುಗ್ಗುವ
ಛಲ ನಿನಗಿರಲಿ

ಅನ್ಯಾಯದ ತೊಟ್ಟಿಲಲ್ಲಿ
ಭ್ರಷ್ಟಾಚಾರದ ಮಗು ಮಲಗಿದಾಗ
ತೊಟ್ಟಿಲು ತೂಗುವ ಬಂಡ
ಕೈಗಳು ಬಡಿದಾಡುವಾಗ
ಇಲ್ಲಿ ನಿನಗಿಲ್ಲ ಜಾಗ

ಅಧಿಕಾರದಾಸೆಗೆ ಕಟ್ಟಿಕೊಂಡ

ಹೆಂಡತಿಯನು ಅಡ್ಡ ಹಾಕುವಾಗ
ಅಧಿಕಾರ ಪಡೆದಾಗ ಕಂಡ ಹೆಣ್ಣುಗಳ
ಜೊತೆಯಲಿ ಸರಸವಾಡುವಾಗ
ಇಲ್ಲಿ ನಿನಗಿಲ್ಲ ಜಾಗ

ಸತ್ಯಕಾಗಿ ದುಡಿದ ಗಾಂಧಿಗೆ
ಗುಂಡಿಕ್ಕಿ ಕೊಂದಿರುವಾಗ
ಇನ್ನು ನೀವೇನು ಮಹಾ ?
ತಾಳ್ಮೆಯಿಂದ ಬದುಕುವ
ಬುದ್ಧಿಯನು ಕಲಿತು ನೀ ಬಾಳು

● ಜಿ. ಮಲ್ಲಯ್ಯಾ ಪೋಲಂಪಲ್ಲಿ
ದೋರನಹಳ್ಳಿ

# ನಟಭಯಂಕರ ಹಂದಿಗನೂರ ಸಿದ್ರಾಮಪ್ಪ



## ಸಿದ್ಧರಾಮ ಉಪ್ಪಿನ

ನಾವೀಗ ನಲವತ್ತೈದು ವರುಷಗಳ ಹಿಂದೆ ನೋಡಬೇಕಾಗುತ್ತದೆ. ಹುಟ್ಟಿನಿಂದ ಕಲೆಯ ಆರಾಧಕನಾಗಿ ಅದನ್ನೇ ಉಸಿರಾಗಿಸಿಕೊಂಡು ಅವಿಸ್ಮರಣೀಯ ಛಾಪುಗಾಲು ಹಾಕಿದ ನಟಭಯಂಕರ, ನಟಕೇಸರಿ "ಹಂದಿಗನೂರ ಸಿದ್ರಾಮಪ್ಪ" ಭಾವ ತನ್ಮಯತೆಯಿಂದ ಜನ ಮೆಚ್ಚುಗೆ ಪಡೆದು ಮೂರು ದಶಕಗಳ ಕಾಲ ರಂಗಭೂಮಿಯ ಸಾಮ್ರಾಟನಾಗಿ ತನಗರಿವಿಲ್ಲದೇ ಮೆರೆದ ಕಲಾ ತಪಸ್ವೀ ಬಗ್ಗೆ ಬಹಳ ಜನಕ್ಕೆ ಗೊತ್ತಿದ್ದರೂ ಅಸ್ಪಷ್ಟವಾದಿದೆ.

ಅಧ್ಯಾತ್ಮ, ಸಂಗೀತ, ಕಲೆಗೆ ಈಗಲೂ ಹೆಸರುವಾಸಿಯಾಗಿರುವ ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಪುಟ್ಟ ಹಳ್ಳಿ ಈ ಹಂದಿಗನೂರು. ದ್ವೀಪಕಲ್ಪದಂತೆ ಸುತ್ತಲೂ ಮರಭೂಮಿಯಂತೆ ಗೋಚರಿಸುವ ಈ ಊರಿನಲ್ಲೇ ಸಿದ್ರಾಮಪ್ಪ ಹುಟ್ಟಿದ್ದು ರಜಪೂತ ಹಜೇರಿ ಮನೆತನದಲ್ಲಿ. ಎಲ್ಲ ಹಿಂದುಳಿದ ಹಳ್ಳಿಗರಲ್ಲಿರುವಂತೆ ಇಲ್ಲಿಯೂ ಸಹ ಮಕ್ಕಳನ್ನು ಶಾಲೆಗೆ ಕಳಿಸಬೇಕೆನ್ನುವ ತಿಳುವಳಿಕೆ ಇರದ ತಾಯ್ತಂದೆಯರು. ಆದರೂ ಸಿದ್ರಾಮಪ್ಪ ನಾಲ್ಕನೇವರೆಗೆ ಹನುಮಂತದೇವರ ಗುಡಿಯಲ್ಲಿ ಓದು ಮುಗಿಸಿದ. ತನ್ನ ತಮ್ಮ ಚಂದ್ರಾಮಪ್ಪನೊಡನೆ ದನ ಕಾಯುಲು ಶುರು ಮಾಡಿದ, ಹಾಗೆಯೇ ಗಿಡಮರ ಏರುತ್ತ ಗುನು, ಗುನು ಹಾಡುವದು-ಬೈಲಾಟದ ಮಾತುಗಳನ್ನು ಓರಿಗೆಯವರಲ್ಲಿ ಹೇಳುವದು, ತನ್ನ ಅಭಿನಯ ಬಟ್ಟಬಯಲಿನಲ್ಲಿ ದಿನಂಪ್ರತಿ ನಡೆಯಿತು. ಈತನ ಕಲಾ ಪ್ರತಿಭೆ ಸಿಡಿಯಲು ಬಹಳ ದಿನ ಬೇಕಾಗಲಿಲ್ಲ. ಇದನ್ನು ಮೊದಲು ಗುರುತಿಸಿದ ವ್ಯಕ್ತಿ ಎಂದರೆ ಹಡಪದ ಮಡಿವಾಳಪ್ಪ, ಈತ ಕೂಡ ಸಂಗೀತಗಾರನಲ್ಲದೆ ಹಿರಿಯ ಕಲಾವಿದನಿದ್ದ, ಒಮ್ಮೆ ಎಲ್ಲ ಹುಡುಗರನ್ನು ಕೂಡಿಸಿ ಬೈಲಾಟ ಕಲಿಸಿ ಆಡಿಸಿದ. ಆ ಮೇಲೆ "ಮನೋ ವಿಜಯ"ವೆಂಬ ನಾಟಕ ಕೂಡ ಪ್ರಯೋಗಿಸಲಾಯಿತು. ಆದರಲ್ಲಿ ಸಿದ್ರಾಮಪ್ಪನ ಪಾತ್ರ ಪ್ರಾಮುಖ್ಯವಾಗಿತ್ತು.

ಮುಂದೆ ಹೀಗೆಯೇ ಹಂದಿಗನೂರದ ತರುಣರೆಲ್ಲ ಕೂಡಿ "ಶನಿಪ್ರಭಾವ"ವೆಂಬ ನಾಟಕ ಕಲಿಯಲು ಪ್ರಾರಂಭಿಸಿದರು. ಹಿರಿಯರೆಲ್ಲ ಅಭಿಮಾನಪಟ್ಟು ಎಲ್ಲ ರೀತಿಯಿಂದ ಸಹಕರಿಸಿದರು. ಇಲ್ಲಿ ಸಿದ್ರಾಮಪ್ಪನದು ವಿಕ್ರಮನ ಪಾತ್ರ. ತಾಯಿ ಹೀರಾಬಾಯಿ ಕೂಡ ನಾಟಕ ನೋಡಿದಳು. ಮಗ ತನಗೆ ರಾಜನಾಗಿಯೇ ಕಂಡ. ಪಾದಮುಟ್ಟಿ ನಮಸ್ಕರಿಸಲು ಬಂದ ಸಿದ್ರಾಮಪ್ಪಗೆ ಜಗತ್ತಿನಲ್ಲಿಯೇ ದೊಡ್ಡ ನಟನಾಗು ಎಂದು ತಲೆಯ ಮೇಲೆ ಕೈಯಿಟ್ಟು ಸವರಿದಳು. ಆ ಮಾತು ಸುಳ್ಳಾಗಲೇ ಇಲ್ಲ.

ಸಿದ್ರಾಮಪ್ಪನನ್ನು ಸುತ್ತಲಿನ ಹಳ್ಳಿಯ ಜನ ಇವನೊಬ್ಬ ಅದ್ಭುತ ನಟನೆಂದು ಗುರುತಿಸಿಕೊಂಡರು. ಅಂತೆಯೇ ಸಿದ್ರಾಮಪ್ಪನವರು ವೃತ್ತಿ ಕಲಾವಿದರಾಗಿ ಅನೇಕ ಕಂಪನಿಗಳಲ್ಲಿ ಕೆಲಸ ಮಾಡಿದರು. ನಾಗಪ್ಪ ಬೋರಾಮಣಿಯವರ ಕಂಪನಿ, ಹುಟಗಿ ಮಹಾರಾಜರ ಕಂಪನಿ, ಆಲೂರ ಕಂಪನಿ, ಗಾನರತ್ನ ಗಂಗೂಬಾಯಿ ಗುಳೇದಗುಡ್ಡ, ಹೋಳಗಿ ರಾಚಪ್ಪ (ಹಂದಿಗನೂರ) ನವರ ಜ್ಞಾನೋದಯ ನಾಟ್ಯ ಸಂಘ, ಹೂಗಾರ ಭೀಮಪ್ಪ ಖ್ಯಾತ ನಾಟಕಕಾರ ಕಂದಗಲ್ ಹಣಮಂತರಾಯರು ನಡೆಸುತ್ತಿದ್ದ ಲಲಿತ ಕಲೋದ್ಧಾರಕ ಕಂಪನಿ, ವಾಣಿ ವಿಲಾಸ ಹೀಗೆ ಕಂಪನಿಯಿಂದ ಕಂಪನಿಗೆ ಅಲೆಯುತ್ತ ಸುಮಾರು ಹದಿನೇಳು. ಹದಿನೆಂಟು ವರುಷ ರಂಗಭೂಮಿಯ ಸೇವೆ ಸಲ್ಲಿಸಿದರು, ಅವರು ಯಾವದೇ ಪಾತ್ರವಹಿಸಲಿ ಅದರಲ್ಲಿ ಜೀವಂತಿಕೆ, ತನ್ಮಯತೆ ಎದ್ದು ಕಾಣುತ್ತಿತ್ತು. ತಾನೇ ಹರಿಶ್ಚಂದ್ರನಾಗಿ. ಭೀಷ್ಮನಾಗಿ. ಹೇಮರೆಡ್ಡಿ ಮಲ್ಲಮ್ಮನ ನಾಟಕದಲ್ಲಿ ವೇಮಣ್ಣನಾಗಿ, ಬಾಣಾಸೂರನಾಗಿ ಮೈಮರೆತು ಅಭಿನಯಿಸುತ್ತಿದ್ದರು ಮಾತಿನ ಗಾಂಭಿರ್ಯದ ಮೌನ, ಕ್ರೋಧದ ಸನ್ನಿವೇಶ, ಗಂಟಲು ಬಿಗಿದಾಗಲಂತೂ ಪ್ರೇಕ್ಷರ ಕಣ್ಣಲಿ ಧಾರಾಕಾರವಾಗಿ ನೀರು ಸುರಿಯಬೇಕು. ಭೀಷ್ಮನ ಪಾತ್ರವಂತೂ ಹುಬ್ಬೇರಿಸುವಂತೆ ಮಾಡುತ್ತಿದ್ದರು. ಆ ಆ ಆವೇಶದ ಮಾತು, ಕಠೋರತೆ, ಚಿತ್ಕಾರ ಕಂಡು ನಾಟಕ ನೋಡಲು ಮುಂದೆ ಕುಳಿತ ಓರ್ವ ಹೆಣ್ಣುಮಗಳ ಗರ್ಭಪಾತವಾಗಿಹೋಯಿತು, ಇದನ್ನು ನೆನೆಸಿದರೆ ಇನ್ನೂವರೆಗೆ ಭಯವಾಗುತ್ತದೆ, ಅವರ ಅಭಿನಯ ಎಂತಹ ಪರಾಕಾಷ್ಠೆ ತಲುಪಿತ್ತೆನ್ನುವದು ಊಹಿಸಬಹುದು.

ಈಗಿನಂತೆ ವಿದ್ಯುತ್ ಥಳಕು, ಬೆಳಕು ಆಗ್ಗೆ ಎಲ್ಲಿ ಸಿಗಬೇಕು ? ಅವೇ ಗ್ಯಾಸ ಬತ್ತಿ (ಬಿಜಲಿ)ಯ ಬೆಳಕು ಮಾಯಿಕ್ ವ್ಯವಸ್ಥೆ ಇಲ್ಲದಾಗೂ ಆ ಗಡಸು ಮಾತುಗಳು ದೂರದ ನೆಲದ ಮೇಲೆ ಕುಳಿತವರಿಗೂ ಕೇಳಿಸಬೇಕು. ಇದೆಲ್ಲ ಇಂದಿನ ಗ್ಲಿಸರಿನ್ ಕಣ್ಣೀರಿನ ನಟರು ಸಿನೇಮಾ ಹಾಡುಗಳು ಟೇಪ್ ಮೂಲಕ ಕುಣಿಯುವದು, ಬಹಳ ವ್ಯತ್ಯಾಸವಲ್ಲದೇ ಆಭಾಸವೆನಿಸುವದು.

ಅನೇಕ ಕಂಪನಿಗಳಲ್ಲಿ ಪಾತ್ರವಹಿಸಿ ಸಂಗಪ್ಪ ಕುಕನೂರ ಇವರ ಕಂಪನಿಯೊಂದಿಗೆ ಸಿದ್ರಾಮಪ್ಪ ಧಾರವಾಡಕ್ಕೆ ಬಂದರು. ಯಾಕೋ ಆ ಕಂಪನಿ ಕೂಡ ಬಿಡುವ ಪ್ರಸಂಗ ಬಂದಾಗ್ಗ ನಂಜುಂಡಶೆಟ್ಟಿಯೆಂಬವರು ಸಿದ್ರಾಮಪ್ಪನವರ ಪ್ರತಿಭೆ ಕಂಡು 1937 ರಲ್ಲಿ "ವಿಶ್ವರಂಜನ ನಾಟ್ಯ ಕಲಾ ಸಂಘ"ವೆಂಬ ಕಂಪನಿ ಮಾಡಿಕೊಟ್ಟು ಆರ್ಥಿಕ ಸಹಾಯದಿಂದ ಮುನ್ನುಗ್ಗಿದರು. ಸುಮಾರು ಒಂದು ವರುಷ "ಉತ್ತರ ಭೂಪ" ಬೇರೆ ಬೇರೆ ಕಡೆ ಆಡಿದರು, ಹುಬ್ಬಳ್ಳಿಯಲ್ಲಿ ಸತ್ಯ ಹರಿಶ್ಚಂದ್ರ ಸಿನೇಮಾ ನಡೆದಿದ್ದರೂ ಸಿದ್ರಾಮಪ್ಪನವರ ಕ್ಯಾಂಪು ಅಲ್ಲಿ ಅದೇ 'ಹರಿಶ್ಚಂದ್ರ' ಸತತ ಮೂರು ತಿಂಗಳವರೆಗೆ ಕಿಕ್ಕಿರಿದ ಪ್ರೇಕ್ಷಕರಿಂದ ಪ್ರದರ್ಶಿಸಲ್ಪಟ್ಟಿತು. ಅಂದಿನ ಧಾರವಾಡದ ಕಲೆಕ್ಟರ್ ಆದ ರಾ. ಬ. ಶಿವಮೂರ್ತಿ ಸ್ವಾಮಿ ಇದನ್ನಲ್ಲಿ ವೀಕ್ಷಿಸಿ "ಅಭಿನಯ ವಿಶಾರದ" ಎಂಬ ಬಿರುದನ್ನಿತ್ತು ಸತ್ಕರಿಸಿದರು.

## ಯಾರ ತಪ್ಪು ?

ಸಿದ್ರಾಮಪ್ಪನವರ ಪತ್ನಿ ಗಿರಿಜಾಬಾಯಿಯವರು ಲಕ್ಷ್ಮೀಬಾಯಿ, ಕೃಷ್ಣಾಬಾಯಿ ಎನ್ನುವ ಇಬ್ಬರು ಹೆಣ್ಣುಮಕ್ಕಳನ್ನು ಹೆತ್ತು ತೀರಿಕೊಂಡರು. ಇದರಿಂದ ಸಿದ್ರಾಮಪ್ಪನವರ ಬದುಕಿನಲ್ಲಿ ಮಹತ್ತರ ಘಟ್ಟ ಪ್ರಾರಂಭವಾಯಿತು. ಇನ್ನೊಂದು ಮದುವೆ ಮಾಡಿಕೊಳ್ಳಬೇಕೆಂಬ ಸ್ನೇಹಿತರ ಒತ್ತಾಯದಿಂದ ಕಲಬುರ್ಗಿಯ ಸಾವಳಗಿ ಗ್ರಾಮದ ಯಶೋಧಾಬಾಯಿ ಎಂಬುವರನ್ನು ಕಟ್ಟಿಕೊಂಡರು. ಆದರೆ ದಾಂಪತ್ಯ ಸುಗಮವಾಗಿ ಸಾಗಲಿಲ್ಲ ವಿರಸ ದಿನೇ, ದಿನೇ ಹೆಚ್ಚಾಯಿತು. ಇದರಿಂದ ಮಾನಸಿಕ ತೊಂದರೆ ಅನುಭವಿಸಬೇಕಾಯಿತು, ಇದಕ್ಕೆ ಯಾರ ತಪ್ಪು ? ಎಂದು ಬಲವಂತವಾಗಿ ತನಗೆ ಎರಡನೇ ಮದುವೆ ಮಾಡಿದ ಬಂಧುಗಳ ತಪ್ಪೇ ? ವಯಸ್ಸಿನಲ್ಲಿ ತೀರಾ ಹಿರಿಯನಾದ ವಿಧುರನಿಗೆ ಮಗಳ ಕೊಟ್ಟ ಆ ತಂದೆ-ತಾಯಿಯ ತಪ್ಪೆ ? ಸವತಿಯ ಮಕ್ಕಳನ್ನು ತನ್ನ ಮಕ್ಕಳೆಂದು ಕಾಣಲಾರದೆ ಇರುವ ಕಿರಿಯ ಹೆಂಡತಿಯ ತಪ್ಪೇ ? ಗೋಡೆಯ ಮೇಲೆ ತೂಗು ಹಾಕಿದ ಫೋಟೋ ಕಡೆ ನೋಡುತ್ತ "ಅಯ್ಯೋ, ಗಿರಿಜಾ..., ಎಂದು ಹೃದಯ ವಿದ್ರಾವಕವಾಗಿ ಪ್ರೇಕ್ಷಕರ ಕಡೆ ಬೆನ್ನು ಮಾಡಿ ನಿಂತು ಎರಡೂ ಕೈಗಳ ಮುಷ್ಠಿಯನ್ನು ಹಿಸುಕುವಾಗ... ಅಗ್ಗ ಪ್ರೇಕ್ಷಕರು ಕಿವಿಗಡಚಿಡುವಂತೆ ಚಪ್ಪಾಳೆ ತಟ್ಟಿದರು.

ಈ ಯಾರ ತಪ್ಪು ? ನಾಟಕ ತನ್ನ ಜೀವನ ಚರಿತ್ರೆಯೇ ರಂಗಭೂಮಿಗೆ ತಂದರು. ಈ ನಾಟಕ ಹುನಗುಂದದ ದಾನಪ್ಪನವರಿಂದ ಬರೆಸಿದರು.

ಇದೇ ನಾಟಕ ಸೋಲಾಪೂರದಲ್ಲಿ ಮರಾಠಿ ಪ್ರಭಾವವಿದ್ದರೂ "ಕೋಣಚೇಚೂಕ" ಎಂಬ ಬೋರ್ಡ ಬರೆಯಿಸಿ ನೂರಾರು ಪ್ರಯೋಗ ನಡೆದು ಜಯಭೇರಿ ಹೊಡೆಯಿತು.

ಇಂಡಿ ತಾಲೂಕದ ತಡವಲಗಾದ ಮುದುಕಿ ಇದ್ದಕಿದ್ದಂತೆ ಈ ನಾಟಕ ನೋಡಿ ಎರಡು ಮೂರು ತಿಂಗಳ ಮೊದಲು... ಈ ನಾಟಕ ಆಡಬಾರದು... ನನ ಮಗನು... ಎಂದು ದೊಡ್ಡ ಧ್ವನಿ ತೆಗೆದು ಅಳಲು ಪ್ರಾರಂಭಿಸಿದಳು. ಆ ನಾಟಕದ ಕಥಾವಸ್ತು ಪ್ರಕಾರ ನಾಯಕನ ಮೊದಲನೇ ಹೆಂಡತಿ ಇಬ್ಬರು ಮಕ್ಕಳನ್ನು ಬಿಟ್ಟು ಸಾಯುತ್ತಾಳೆ. ಎರಡನೇ ಹೆಂಡತಿ ಮಲಮಕ್ಕಳನ್ನು ವಿಷ ಹಾಕಿ ಕೊಲ್ಲಲು ಯತ್ನಿಸುವಳು. ಆದರೆ ತಪ್ಪಿ ಕಥಾ ನಾಯಕನೇ ವಿಷ ಪಾಶನ ಮಾಡಿ ನಂತರ ಹುಚ್ಚನಾಗುವನು. ಮಕ್ಕಳು ಇದ್ದಾಗ ಮದುವೆ ಆಗುವದು ತಪ್ಪೇ ? ಇಂತಹ ಲಗ್ನ ಪ್ರೋತ್ಸಾಹಿಸುವ ಸಮಾಜದ ತಪ್ಪೇ ? ಹೀಗೆಲ್ಲ ಸ್ವಗತ ಮಾತನಾಡುವ ನಾಯಕನ ಸನ್ನಿವೇಶ ಮುಕ್ತಾಯದವರೆಗೂ ಗೊಂದಲದಲ್ಲಿ ಯಾರ ತಪ್ಪು ? ಎಂದು ಪ್ರಶ್ನೆಯಾಗಿಯೇ ಉಳಿಯುವದು. ಒಂದು ಕುಟುಂಬದ ದುರಂತ ಸನ್ನಿವೇಶವೇ ಈ ಚಿತ್ರಣವಾಗಿತ್ತು.

ತನ್ನ ಸೊಸೆ ತೀರಿದ ನಂತರ ಇನ್ನೊಂದು ಹೆಣ್ಣು ತಂದು ಆ ಮುದಕಿ ಮಗನಿಗೆ ಲಗ್ನ ಮಾಡಿದ್ದಳು. ಅಂತೆಯೇ ಈ ನಾಟಕ ಮೊದಲೇ ಬಂದಿದ್ದರೆ ನನ್ನ ಮಗನಿಗೆ ಈ ಗತಿ ಬರುತ್ತಿದ್ದಿಲ್ಲವೆಂದು ಸಿದ್ರಾಮಪ್ಪನವರನ್ನು ಭೆಟ್ಟಿಯಾಗಿ ಗೋಳಿಟ್ಟಳು.

ಒಮ್ಮೆ ಚಡಚಣ ಕ್ಯಾಂಪದಲ್ಲಿ ಹರಿಶ್ಚಂದ್ರ ನಾಟಕ ನಡೆದಿತ್ತು. ಪ್ರತಿನಿತ್ಯ ಥೇಟರ ತುಂಬಿ ತುಳುಕುತ್ತಿತ್ತು. ಒಂದು ದಿನ ಮುಂಜಾನೆ ಸಿದ್ರಾಮಪ್ಪನವರು ರಸ್ತೆಗುಂಟ ಸುಮ್ಮನೆ ನಡೆದಿದ್ದರು. ಏಕಾ ಏಕೀ, ಒಬ್ಬ ಹಳ್ಳಿಯವ ತನ್ನ ಕೈಚೀಲ ನೆಲದಮ್ಯಾಗ ಒಗೆದು ಸಾಷ್ಟಾಂಗ ಹಾಕಿದ. ಯಾಕರೀ ? ಏನಾಗಿ ಎಂದು ಸಿದ್ರಾಮಪ್ಪನವರು ಹಿಂದಕ್ಕ ಸರಿದರೂ ಬಿಡಲಿಲ್ಲ. "ಯಪ್ಪೋ ಹರಿಶ್ಚಂದ್ರ" ಎಂದು ಮೇಲೆದ್ದ ನೋಡಿದ ಜನ ಬಹಳ ನಕ್ಕರಂತೆ. ಆಗ್ಗೆ ಹಾಕಿವ ಥೇಟರ ಜಾಗ ಇನ್ನೂ ವರೆಗೆ ಚಡಚಣ ದಲ್ಲಿ 'ಸಿದ್ರಾಮಪ್ಪನ ಜಾಗಾ' ಎಂದೇ ಕರೆಯಬೇಕಾದರೆ ಅಚ್ಚರಿ ಎನಿಸುವದು.

## ನಟ ಸಾರ್ವಭೌಮ !

ಕಲಬುರ್ಗಿ ಜಿಲ್ಲೆಯ ಜೇವರಗಿ ತಾಲೂಕಿನ 'ಆಂದೋಲಾ' ಎಂಬ ಊರಲ್ಲಿ ಗುರುಲಿಂಗಪ್ಪಗೌಡ ಪಾಟೀಲ್ ಎಂಬ ಆಗರ್ಭ ಶ್ರೀಮಂತರು ಕಲಾಭಿಮಾನಿಗಳು ಮೇಲಾಗಿ ರಸಿಕರು. ಆಗ್ಗೆ ಅವರದು ನೂರು ಎಕ್ರಿನ ಕಮತ. ಮನೆಯಲ್ಲಿ ನೂರಾರು ದನ ಕರುಗಳು, ಅವರಿಗೆ ನಾಟಕ ನೋಡುವ ಹವ್ಯಾಸ ಬಹಳ. ಈ ಸಿದ್ರಾಮಪ್ಪನವರ ಕಂಪನಿ ತಮ್ಮೂರಿಗೆ ಕರೆಯಿಸಿಕೊಂಡು ಎಲ್ಲ ನಾಟಕ ಒಂದೊಂದು ದಿನ ಆಡಲು ಹೇಳಿದರು. ಮೊದಲಿಗೇ 'ರಾಜಾ ಹರಿಶ್ಚಂದ್ರ' ಪ್ರಾರಂಭವಾಯಿತು, ಗೌಡರು ಎರಡನೇ ದಿನವೂ ಆಡಲು ಹೇಳಿದರು, ಮತ್ತೊಂದು ದಿನ ಇವನ್ನೇ ಆಡಲು

ಹೇಳಿದರು. ನಟ ನಟಿಯರ ಊಟೋಪಚಾರ ರಾಜೋಪಚಾರವಾಗಿ ಗೌಡರ ಮನೆಯಲ್ಲಿಯೇ ನಡೆಯಿತು. ಕಲಾ ಜಗತ್ತಿನ ಇತಿಹಾಸದಲ್ಲಿಯೇ ನಡೆಯದ ಹೋದ ಸನ್ನಿವೇಶ ಈ ಗ್ರಾಮದಲ್ಲಿ ನಡೆದು ಹೋಯಿತು. ಎಪ್ಪತ್ತೈದು ತೊಲೆಯ ಬೆಳ್ಳಿಯ ಕಿರೀಟ ಅದಕ್ಕೆ ಮುತ್ತಿನ ಹರಳು ಕೂಡ್ರಿಸಲಾಯಿತು. ಒಂದು ತೊಲಿ ಬಂಗಾರ ಉಂಗುರು ತಯಾರು ಮಾಡಿಸಿ, ಹರಿಶ್ಚಂದ್ರ ಸ್ಮಶಾನ ಕಾಯುವ ಸನ್ನಿವೇಶದಲ್ಲಿಯೇ "ನೀನು ನಿಜವಾದ ರಂಗಭೂಮಿಯ ನಟ ಸಾರ್ವಭೌಮನಪ್ಪ" ಎಂದು ತಲೆಯಮೇಲೆ ಇಟ್ಟಾಗ ಜನ ಮಂತ್ರ ಮುಗ್ಧರಾಗಿ ಗದ್ಗದ ಕಂಠದಿಂದ ಅತ್ತರು. ಒಮ್ಮೆಗೆ ನಡೆದ ಈ ಸನ್ನಿವೇಶದಲ್ಲಿ ಸಿದ್ರಾಮಪ್ಪನವರಿಗೆ ಮಾತೇ ಹೊರಡಲಿಲ್ಲ, ಕೇವಲ ಬಿಕ್ಕಿ, ಬಿಕ್ಕಿ ಅತ್ತರು. ಸತತ ಮೂವತ್ತು ಪ್ರಯೋಗ ಈ ಹಳ್ಳಿಯಲ್ಲಿ ಸಿನೇಮಾ ರೀಲು ಬಿಟ್ಟಂತೆ, ಎಲ್ಲ ನಟರೂ ಅಭಿನಯಿಸಿದರು. ಅದೇ ಕಣ್ಣೀರು. ಅದೇ ತಾರಾಮತಿ, ಅದೇ ಲೋಹಿತ ನಕ್ಷತ್ರಿಕ ಎಂತಹ ಅದ್ಭುತ ನಟನೆ ? ಎಂದು ಉದ್ಗರಿಸಿದರು.

ಇದೇ ಸ್ಮಶಾನ ಸನ್ನಿವೇಶದಲ್ಲಿ ಹರಿಶ್ಚಂದ್ರ-ತಾರಾಮತಿಯ ಕೂದಲು ಸರಿಸಿ ಕೊಡಲಿಯಿಂದ ಕುತ್ತಿಗೆಗೆ ಹೊಡೆಯುವ ಸನ್ನಿವೇಶ. ಏಕಕಾಲಕ್ಕೆ ಎಡಗೈ ಕೈಯಿಂದ ಧಿಡೀರನೇ ಬಂದ ಕೊಡಲಿಯನ್ನು ಕಂಡು, ಶಿವನೇ ಹೋಗಿರಬೇಕೆಂದು ಸಾಯಿಡ್ ವಿಂಗ್ಸ್‌ದಲ್ಲಿದ್ದವ ಹುಡುಗ ಪಡದೇ ಬಿಟ್ಟು ಬಿಟ್ಟ. ಜನ ಒಮ್ಮೆಗೆ ಅಂದರೆ ಒಂದೇ ಸ್ವರದಿಂದ ಕೂಗಿದರು. ಇದನ್ನೆಲ್ಲ ಗಮನಿಸದ ತಾರಾಮತಿ ಕೂಡ ಮೂರ್ಛೆ ಹೋದಳು. ತಾರಾಮತಿ ಪಾತ್ರದ ಹೆಣ್ಣುಮಗಳು ಸತ್ತಳೆಂದೇ ಜನ ರಂಗಭೂಮಿಗೆ ಹೌಹಾರಿ ಬಂದರು, ಆದರೆ ಹರಿಶ್ಚಂದ್ರ ಪಾತ್ರಧಾರಿಯಾದ ಸಿದ್ರಾಮಪ್ಪನವರು ಕುತ್ತಿಗೆಗೆ ಬರುವವರೆಗೆ ಜೋರಾಗಿ ಬೀಸಿದಂತೆ ಕೊಡಲಿ ತಂದದ್ದು ವಿಸ್ಮಯಕರ ನಂತರ ತಾರಾಮತಿ ಪಾತ್ರದಾರಿ ಹೆಣ್ಣುಮಗಳಿಗೆ ನೀರು ಸಿಂಪಡಿಸಿ ಎಚ್ಚರಿಸಲಾಯಿತು.

## ಚಲನಚಿತ್ರ

ಸುಪ್ರಸಿದ್ಧ ಸಾಹಿತಿ, ಅ.ನ.ಕೃ. ಬಿ.ಟಿ. ಸಾಸನೂರ, ಮಲ್ಲಿಕಾರ್ಜುನ ಮನ್ಸೂರ್ ಪ್ರೊ. ಟಿ. ರುಜೆನ್. ನೀಲಕಂಠಪ್ಪ ಹಮ್ಮಿಗಿ, ಅಮೀರಬಾಯಿ ಕರ್ನಾಟಕಿ ಇವರೆಲ್ಲ ಸಿದ್ರಾಮಪ್ಪನವರ ಬಗ್ಗೆ ಅಪಾರ ಆದರಾಭಿಮಾನ ಹೊಂದಿದ್ದರು.

ಅಂತೆಯೇ ವಿಜಾಪುರದ ಪ್ರೊ. ಬಿ. ಟಿ, ಸಾಸನೂರ ಅವರು 1947 ರಲ್ಲಿ 'ಪಂಪಾ ಪಿಕ್ಚರ್ಸ್'ರವರ ಚಂದ್ರಹಾಸ ಸಿನೇಮಾದಲ್ಲಿ ದುಷ್ಟಬುದ್ಧಿ ಪಾತ್ರವಹಿಸಲು

ಕೊಲ್ಹಾಪುರಕ್ಕೆ ಕಳಿಸಿದರು. ಇವರ ಅಸ್ತವ್ಯಸ್ತ ಉಡುಗೆ-ತೊಡಿಗೆ ಕಂಡು ಅಲ್ಲಿಯ ಮರಾಠಿಗರು ವ್ಯಂಗ್ಯವಾಗಿ ನೋಡಿದರು. ಆದರೆ ಮೇಕಪ್ ರೂಂ ದಿಂದ

ಸಿದ್ರಾಮಪ್ಪನವರು ಮೀಸೆ ಹುರಿ ಮಾಡಿಕೊಂಡು ಹೊರಬಂದಾಗ್ಗೆ ಗಾಭರಿಯಾದರು, ವಿಕಾರ ರೂಪದಿಂದ ಪರಿಭಾಷಣೆ ಪ್ರಾರಂಭಿಸಿದ ತಕ್ಷಣ ತಾಂತ್ರಿಕ ಕೆಲಸಗಾರು ಅಲ್ಲದೆ ಕ್ಯಾಮರಾಮೆನ್ ಸಹಿತ ಓಡಿ ಹೋಗಬೇಕಾಯಿತು. ಅದ್ಯಾಕೋ ಸಿದ್ರಾಮಪ್ಪನವರಿಗೆ ಮುಂದೆ ಸಂದು ಬೇನೆ ಪ್ರಾರಂಭವಾಯಿತು. ಅಂತಹ ಜ್ವರದಲ್ಲೂ ಸತತ ಶೂಟಿಂಗ್ ಮುಗಿಸಿ ಹಂದಿಗನೂರಿಗೆ ಬಂದರು.

8–11–47 ರಂದು ತಾವು ಅಭಿನಯಿಸಿದ ಚಿತ್ರದ ಮೊದಲ ಕಂತಿನ ಹಣ ಅಂಚೆಯ ಮೂಲಕ ಹಾಸಿಗೆಯ ಮೇಲಿಂದಲೆ ಸ್ವೀಕರಿಸಿದರು. ಮೇಲಾಗಿ ಹತ್ತನೇ ತಾರಿಕಿನಂದು ಬೆಳಗಾಂವದಲ್ಲಿ 'ಚಂದ್ರಹಾಸ' ಫಿಲ್ಮ ಬಿಡುಗಡೆ ಸುದ್ದಿ ಕೇಳಿದರು, ಸಂದು ನೋವು ಅತೀಯಾಯಿತು. ಅಪಾರ ನೋವಿನಿಂದ ತಾನು ಅಭಿನಯಿಸಿದ ಚಿತ್ರ ನೋಡದೆ ಈ ಲೋಕವನ್ನು ತ್ಯಜಿಸಿದರು.

ಇಂತಹ ಮಹಾ ನಟ ಸಾಮ್ರಾಟ್, ರಂಗ ಭೂಮಿಯ ಹುಲಿಯನ್ನು ಕನ್ನಡಿಗರು ಕಳೆದುಕೊಂಡದ್ದು ದುರದೃಷ್ಟಕರ, ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ಅವರನ್ನು ಮೀರಿಸುವ ಕಲೆಗಾರಿಕೆ ಯಾರಿಗೂ ಇಲ್ಲ, ಏನು ಮಾಡುವದು ? ಮಿಂಚಿ-ಅದೃಶ್ಯವಾಯಿತು.

## ಆದರೆ ?

ಇದೇ 'ಚಂದ್ರಹಾಸ' ಪಿಕ್ಚರ್ ತಾಳೀಕೋಟೆಯ ಟೂರಿಂಗ್ ಟಾಕೀಜದಲ್ಲಿ ಬಂದಿತ್ತು. ದುಷ್ಟ ಬುದ್ಧಿಯ ಪಾತ್ರದ ಸಿದ್ರಾಮಪ್ಪನವರ ಧ್ವನಿ ಕೇಳಿ ಎಲ್ಲಿಂದಲೋ ಬಂದ ಒಂದು ನಾಯಿ ಸ್ಕ್ರೀನ ಪರದೆ ಹರಿಯಿತು, ಪೇಕ್ಷಕರು ಗಾಭರಿಯಾದರು, ಆದರೆ...? ಆ ನಾಯಿ ಸಿದ್ರಾಮಪ್ಪನವರದು, ಅವರ ಕಂಪನಿಯಲ್ಲಿ 5-6 ವರುಷಗಳ ವರೆಗೆ ಜತೆಯಲ್ಲಿಯೇ ಇತ್ತು. ತನ್ನ ಒಡೆಯನ ಕಂಚಿನ ಧ್ವನಿ ಕೇಳಿ ಈ ರೀತಿ ಧಾವಿಸಿ ಬಂದಿತ್ತು. ಆ ಪ್ರೀತಿ ಮತ್ತೊಮ್ಮೆ ಕಾಣಬೇಕೆನಿಸಿರಬೇಕು ಪಾಪ! ಆ ಮೂಕ ಪ್ರಾಣಿಗೇನು ಗೊತ್ತು ?

# ಎರಡು ತೆಲುಗು ಪದ್ಯಗಳು

ನನ್ನ ವಿದ್ಯಾಭ್ಯಾಸವೊಂದು ಯುದ್ಧ
ನನ್ನ ಬದುಕು ನಿತ್ಯ ಕಂಟಕ
ಹಡೆದಪ್ಪನ ಕೈಯಲ್ಲಿ । ರಾಗಗಳಾಲಾಪನದ ಕೂರಿಗೆ
ನನ್ನ ಹೃದಯದೊಳಗೆ ಮುದ್ರೆಯೊತ್ತುತ್ತದೆ
ನಮ್ಮ ಅಮ್ಮ ನೀಡಿದ ಹಿಡಿ ಹಿಡಿ ಗುರ್ತುಗಳು
ಮನೆಮುಂದಿನ ಗೋಡೆ ಮೇಲೆ ಶಿಥಿಲವಾಗುತ್ತವೆ
ನಮ್ಮ ತಂಗಿ ತನ್ನ ಗಂಡನ ಮನೆಯಲ್ಲಿ
ಖಡ್ಗ ಮೊನಚಿನ ಮೇಲೆ ಉರುಳುರುಳಿದ
ಕೃಷ್ಣಶಾಸ್ತ್ರಿ ಕವಿತಾ ಪುಷ್ಪವಾಗುತ್ತದೆ
ನಂಡೂರಿ ಕಥೆಯ ಸಾಕ್ಷಿಯಂತೆ ಪ್ರೇಮಿಸಿದ
ನನ್ನ ಹೃದಯದೀಪ ಹೇಳದೆ ಕೇಳದೆ ಶಾಂತವಾಗುತ್ತದೆ
ಈಗ ನನ್ನ ಹಳ್ಳಿಗೆ ನಾನೇ ಅಪರಿಚಿತ
ನನ್ನ ಹಳ್ಳಿಯಿಂದ ಬಹಿಷ್ಕೃತನೂ ನಾನೇ
ಮಣ್ಣೊಳಗೆ ಕಳೆದಿರುವ ಹಸ್ತಗಳು । ದೂರದೂರವಾಗುತ್ತಿವೆ
ನಾನು ಕಲಿತ ಅಕ್ಷರಗಳು । ಕುಶಲ ಶಿಲ್ಪಿಯ
ಕೈಯ ಮೊಂಡಾದ ಉಳಿ ನಾನು

—ಕಾಸುಲ ಪ್ರತಾಪರೆಡ್ಡಿ
ಅನು : ಕುಂವೀ

# ಆಲಜೀ

ಜನಾರಣ್ಯದ ವಿದ್ಯಾಮಾನ
ಕ್ರೂರಹಿಂಸೆ ನಿರ್ವಾಚನ
ಕಾಡುದಾವಾನಲ ರುಮಾಲು
ತಲೆಗೆ ಪೇಟ
ತನ್ನೊಳಗೆ ಬತ್ತಿವೆ ನದಿಗಳು
ಬತ್ತಿವೆ ಶ್ವೇದರಂಧ್ರ ರುಧಿರ ಮೂಲಗಳು
ದೇಹದಾದ್ಯಂತ ಕಡಲ ಬಡಬಾಗ್ನಿ
ಕೆಂಪಗೆ ಅಡರುತ್ತಿದೆ ಮುಗಿಲ
ನೋಡಾಚೆ
ಕೆರಳಿದ ಸೂರ್ಯ ಕೆಂಡಗುಗ್ಗುಳ ಗ್ರೀಷ್ಮ
ಸೂರ್ಯನೆಂದರೆ ಅವಿಶ್ರಾಂತ ಶ್ರಮಜೀವಿ
ಸೂರ್ಯನೆಂದರೆ
ತಾನಾಗುತ್ತಲಿ ಕೆಸರಪಾಲು
ಸಚರಾಚರಕ್ಕೆ ಚೈತನ್ಯ ತುಂಬುತ್ತಿರುವ
ಮಹಾನುಭಾವ
ಸೂರ್ಯೋದಯ ಅರುಣಾರುಣ
ಈ ಕಡೆ ಅಸ್ತಮಯ
ಆ ಕಡೆ ಅರುಣೋದಯ
ಮಿಸ್ಟರ್ ಪ್ರೋಲೀಸ್
ಕೆಂಪೆಂದರೆ ನಿನಗೆ ಅಲ್ಲವೆ ಅಲರ್ಜಿ
ಕಮಾನ್ ಅರೆಸ್ಟ್ ದಮ್

—ಅರುಣಕುಮಾರ್

ಅನು : ಕುಂವೀ

# 'ಪ್ರಾಮಾಣಿಕ ಮನಸ್ಸುಗಳು ಮತ್ತು ಪತ್ರಿಕೋದ್ಯಮ'



● ಟಿ. ಎಸ್. ಷಣ್ಮುಖ
ಸಂಪಾದಕ : ಪ್ರಜಾಕೂಗು ದಾವಣಗೆರೆ

ನನ್ನ ಕಿಸೆಯಲ್ಲಿ ಕಾಸಿದ್ದರೆ ಬಿಯರ್ ಕುಡಿಯುತ್ತೇನೆ. ಸಿಗರೇಟು ಸೇದುತ್ತೇನೆ. ನನ್ನ ಲೂನಾದಲ್ಲಿ ಪೆಟ್ರೋಲಿದ್ದರೆ ದೂರ ಹೋಗಿ ಏಕಾಂಗಿಯಾಗಿ ಏಕಾಂತದಲ್ಲಿ ಚಿಂತಿಸುತ್ತೇನೆ. ನನಗೆ ಈ ಉದ್ಯಮ ಬೇಸರವೆನಿಸಿದೆ. ರಾಜಕಾರಣಿಗಳ ಪರಿವರ್ತಿಸುವ ಈ ಪತ್ರಕರ್ತರನ್ನು ಕಂಡರೆ ನಾಚಿಕೆ, ಬೇಸರವಾಗುತ್ತದೆ," ಇದು ಪ್ರಾಮಾಣಿಕ ಪತ್ರಕರ್ತನ ನೋವಿನ ಮಾತು.

ಆತ ಸೃಜನಶೀಲ ಬರಹಗಾರ, ಈ ನಾಡಿನ ಹೆಸರಾಂತ ಪತ್ರಿಕೆಗಳಲ್ಲಿ ವರದಿ ಮಾಡಿದ ವರದಿಗಳು ಭ್ರಷ್ಟ ರಾಜಕಾರಣಿಗಳ ಮುಸುಕುಗಳನ್ನು ಚಿಂದಿ ಉಡಾಯಿಸಿದವನು. ಸರಕಾರದ ಭ್ರಷ್ಟಾಚಾರದ ಬಗ್ಗೆ ವರದಿ ಮಾಡಿ ಅಧಿಕಾರದಲ್ಲಿರುವ ನೀಚ ರಾಜಕಾರಣಿಗಳಿಗೆ ಮುಜುಗರ ಉಂಟು ಮಾಡಿದಾತ. ಇಂಥ ಸಂದರ್ಭಗಳಲ್ಲೇ ಈ ವರದಿಗಾರ ಕಾರು-ಬಂಗಲೆ, ಒಟ್ಟಾರೆ ಐಷಾರಾಮದ ಬದುಕು ಸಾಗಿಸುವ ಅವಕಾಶಗಳನ್ನೆಲ್ಲ ಕಾಲಿಂದ ಜಾಡಿಸಿದವನು, ತಾನು ನಂಬಿಕೊಂಡ ಉದ್ಯಮ ಪವಿತ್ರವಾಗಿರಬೇಕೆಂದು ಬಯಸಿ ನಿರ್ದಾಕ್ಷಿಣ್ಯದ ನೇರ ಸತ್ಯದ ಸಿದ್ಧಾಂತ ನಂಬಿರುವ ವರದಿಗಾರ ಈಗಲೂ ಪ್ರಾಮಾಣಿಕತೆಯನ್ನು ನಂಬಿ ಈಗಿನ ಗೋಸುಂಬೆ ಪತ್ರಕರ್ತರ ಬಗ್ಗೆ ನಾಚಿಕೆಪಡುತ್ತಾ ಸಂಕಟ ಪಡುತ್ತಿರುವನು.

ಈಗೀಗ ಪತ್ರಿಕೋದ್ಯಮ ಕುಲಗೆಟ್ಟಿದೆ. ವೃತ್ತಿ ರಾಜಕಾರಣಿಗಳಂತೆ ವರ್ತಿಸುವ ಪತ್ರಕರ್ತ ಪತ್ರಿಕೋದ್ಯಮದ ಮೇಲೆ ಅತ್ಯಾಚಾರ ಮಾಡಲಾರಂಭಿಸಿದ್ದಾನೆ ಒಬ್ಬ ಭ್ರಷ್ಟ ರಾಜಕಾರಣಿಯ ಮುಖವಾಡ ಧರಿಸಿರುವ ವರದಿಗಾರ, ರಾಜಕಾರಣದ ಮತ್ತೊಂದು ಮುಖವಾಡ ಧರಿಸಿ ಹಂಗಿನರಮನೆಯಲ್ಲಿ ಪತ್ರಿಕೋದ್ಯಮದ ರೀತಿ-ರಿವಾಜುಗಳನ್ನೆಲ್ಲ ಅಡವಿಟ್ಟುಬಿಟ್ಟಿದ್ದಾನೆ.

ಇಂಥ ವ್ಯವಹಾರಿಕ ಪತ್ರಿಕೋದ್ಯಮವನ್ನಾರಂಭಿಸಿದವರ ಮಧ್ಯ ಪತ್ರಿಕೋದ್ಯಮಿ ಜಥವ ವರದಿಗಾರ ಕುಬ್ಜನಾಗುತ್ತಾನೆ. ವರದಿಗಾರ ರಾಜಕಾರಣಿಯ ಮಧ್ಯೆ ಒಬ್ಬ ಸೃಜನಶೀಲ ಪತ್ರಕರ್ತ ನೇಪಥ್ಯದೆಡೆಗೆ ನೂಕಲ್ಪಡುತ್ತಾನೆ.

ನನಗೆ ಈ ಉದ್ಯಮ ಬೇಸರವೆನಿಸಿದೆ ಕಾರಣ ಇಲ್ಲಿನ ಪತ್ರಕರ್ತರಲ್ಲಿ ರಾಜಕಾರಣಿಯ ಎಲ್ಲ ಗುಣಗಳು ಸಮ್ಮಿಲನಗೊಂಡಿವೆ. ರಾಜಕಾರಣಿಯ ಮಧ್ಯವರ್ತಿಯಂತೆ ವರ್ತಿಸುವ ವರದಿಗಾರ ತನ್ನೆಲ್ಲ ಬರಹದ ಶ್ರಮವನ್ನು ಒಬ್ಬನ ಕೀರ್ತಿಯ ತೆವಲಿಗಾಗಿ ಬಳಸಿಬಿಡುತ್ತಾನೆ. ಇಡೀ ಪತ್ರಿಕೋದ್ಯಮವನ್ನೇ ಒಬ್ಬ ವ್ಯಕ್ತಿಯ ಹೊಗಳಿಕೆಯಲ್ಲೇ ಗುಲಾಮತನದಂತೆ ಬಳಸಿಬಿಡುತ್ತಾನೆ. ಇವೆಲ್ಲ ನಾಚಿಕೆಗೇಡಿನ ಸಂಗತಿಗಳು.

ಸಾಮಾನ್ಯವಾಗಿ ಈಗಿನ ಪತ್ರಿಕೋದ್ಯಮ, ಓದುಗನ ಆಶಯವನ್ನೇ ಮರೆತು ಕಾಟಾಚಾರದ ಪತ್ರಿಕೆಗಳಂತೆ ವರ್ತಿಸುತ್ತಿವೆ, ಸುದ್ದಿ ಮಾಧ್ಯಮದ ಜಾಡು ಕೇವಲ ಒಬ್ಬನ ಬದುಕಿನ ಮಾಧ್ಯಮದಂತೆ ವರ್ತಿಸುತ್ತಿವೆ.

ಇವೆಲ್ಲ ದಂಧೆಗಾಗಿ ಇಳಿದಿರುವ ಪತ್ರಿಕೆಗಳ ಮತ್ತು ಪತ್ರಕರ್ತರ ಮಾತಾಯಿತು. ಇನ್ನು ಒಬ್ಬ ಪ್ರಾಮಾಣಿಕ ವರದಿಗಾರನ ಬದುಕು ಮಾತ್ರ ವಿಚಿತ್ರವಾದದ್ದು. ಭ್ರಷ್ಟಾಚಾರದಲ್ಲಿ ರಾಜಕಾರಣಿಗಳನ್ನು ಪೋರಿಸಿ ಬಿಡುವ ವರದಿಗಾರರ ಮಧ್ಯೆ ಒಬ್ಬ ಉತ್ತಮ ಬರಹಗಾರ ತನ ಬರಹದ ಸೃಜನಶೀಲತೆಯನ್ನು ಓದುಗನಿಗೆ ನೀಡಲು ಸಾಧ್ಯವಾಗುವುದಿಲ್ಲ. ಭ್ರಷ್ಟ ಮನಸ್ಸುಗಳ ಗುಂಪುಗಾರಿಕೆಯ ಮಧ್ಯೆ ಪ್ರಾಮಾಣಿಕ ವರದಿಗಾರನ ನೈತಿಕತೆ ಹಲಬುತ್ತದೆ.

ಪತ್ರಿಕೆಗಳು ಹೊಣೆ ಅರಿಯು ಮಾಡುವ ಕೆಲಸ ಮಾತ್ರ ಈಗ ಕುಲಗೆಡಿಸಿಕೊಂಡಿವೆ ಅರಿವಿರುವ ಪತ್ರಕರ್ತ, ರಾಜಕೀಯ ಭಾನಗಡಿ ದಂಧೆಗೆ ವಿರುದ್ಧವಾಗಿ ವರದಿ ಮಾಡಿದ್ದಲ್ಲಿ ರಾಜಕಾರಣಿಗಿಂತ ಮೊದಲೇ ಅವನ ಮುಖವಾಣಿಯಂತೆ ಪತ್ರಕರ್ತರೇ ವರ್ತಿಸಿ ಪತ್ರಕರ್ತನ ವಿರುದ್ಧ ಕೆಲಸ ಮಾಡಿ ಮಾನಸಿಕ ಹಿಂಸೆ ಮಾಡಿಬಿಡುತ್ತಾರೆ. ಭ್ರಷ್ಟನ ಸಂಗಾತಿಗಳಂತೆ ಅವನ ಹಂಗಿನಲ್ಲೇ ಬದುಕಲು ಯತ್ನಿಸುತ್ತಾರೆ ಇವೆಲ್ಲ ಕಟು ಸತ್ಯ.

ಇಂಥ ದಂಧೆಗಿಳಿದ ಪತ್ರಿಕೆ, ಪತ್ರಕರ್ತನಿಂದ ಇಡೀ ಸುದ್ದಿ ಮಾಧ್ಯಮ ಕಲುಷಿತಗೊಂಡಾಗ ಪ್ರಾಮಾಣಿಕ ವರದಿಗಾರನ ನೈತಿಕತೆಗೆ ಅವನ ಸ್ವಾಭಿಮಾನಕ್ಕೆ ಬಲವಾದ ಪೆಟ್ಟು ಬೀಳುತ್ತದೆ, ಈ ಉದ್ಯಮ ಬೇಸರ ತರಿಸುತ್ತದೆ.

ಕೆಲವು ಸಂಗತಿಗಳನ್ನು ಉದಾಹರಿಸುತ್ತೇನೆ.

ಈ ಹಿಂದೆ ನನ್ನ ಮೇಲೆ ಪೋಲೀಸ್ ಠಾಣೆಯಲ್ಲಿ ಹಲ್ಲೆ ನಡೆದಾಗ ಇಲ್ಲಿನ ಕೆಲವು ಸುದ್ದಿ ಮಾಧ್ಯಮಗಳು (ಪತ್ರಿಕೆಗಳು) ತುಟಿ ಹೊಲಿದುಕೊಂಡವು. ನನ್ನ ಮೇಲಾದ ಹಲ್ಲೆಯನ್ನು ವಿವರಿಸಲು ಪತ್ರಿಕಾಗೋಷ್ಠಿ ಕರೆದಾಗ ಮಾತಿನ ಮಧ್ಯೆ ಒಬ್ಬ ವರದಿಗಾರ "ನಿಮ್ಮದು ವೈಯಕ್ತಿಕ ಗಲಾಟೆ" ಎಂದ. ನನಗೆ ಇವನ ಬಗ್ಗೆ 'ಅಯ್ಯೋ ಪಾಪ' ಎನ್ನುವಂತಾಯಿತು. ಈತನ ವರದಿಗಾರಿಕೆಯ ಚರಿತ್ರೆ ಬಲ್ಲ ನಾನು ಇವನ ಬಗ್ಗೆ ಮರುಕಪಟ್ಟೆನಷ್ಟೆ, ಮತ್ತೊಂದು ವಾಣಿ "ಸಂಪಾದಕನ ಭ್ರಷ್ಟಾಚಾರದ ಬಯಲು" ಎಂದು ತನಿಖೆ ಮಾಡಿದಂತೆ ಬರೆಯಿತ. ಇವರಿಗೆ ಭ್ರಷ್ಟಾಚಾರವ ರೂಪಗಳ ಬಗ್ಗೆಯೇ ಅರಿವಿರದಂತೆ ಬರೆಯಿತು. ಈ ಪತ್ರಿಕೆ ಮತ್ತು ವರದಿಗಾರ ಇಬ್ಬರೂ ಈ ಉದ್ಯಮಕ್ಕೆ ನಾಲಾಯಕ್ ತರಹ ವರ್ತಿಸಿದವು. ಇವೆಲ್ಲ ಈ ಉದ್ಯಮದ ವಿರೋಧಾಭಾಸಗಳು. ಇಂಥವರಿಂದಲೇ ಪತ್ರಕರ್ತನ ನೈತಿಕತೆ ಹಳ್ಳ ಹಿಡಿಯುವುದು. ಇವರೇ ಈ ನಾಡಿನ ಶ್ರೇಷ್ಠರೆಂಬಂತೆ ಈ ಭ್ರಷ್ಟ ರಾಜಕಾರಣಿಗಳಿಗೆ ತೋರುವುದು.

ಈ ಜನರಿಗೆ ಇಂಥವರಿಂದ ಸತ್ಯ ಹೇಳಲಾಗುವದಿಲ್ಲ. ಅದರ ಕನಿಷ್ಟ ಪ್ರಯತ್ನ ಕೂಡ ಸಾಧ್ಯವಾಗುವುದಿಲ್ಲ. ಇಂಥವರ ಮಧ್ಯೆ ಪತ್ರಕರ್ತನ ಪ್ರಾಮಾಣಿಕತನವು ಬೆಳಕಿಗೆ ಬರಲು ಸಾಧ್ಯವಾಗುವುದಿಲ್ಲ. ಸತ್ಯ ಕಮರುತ್ತದೆ ಇವರು ಸುಳ್ಳು ಬರೆದದ್ದೇ ತಾತ್ಕಾಲಿಕ ಸತ್ಯವಾಗುತ್ತದೆ. ಇವರೆಲ್ಲ 'ಸುಳ್ಳನ್ನೇ ಸತ್ಯ' ಎಂದು ಹತ್ತು ಬಾರಿ ಬರೆದು 'ಸತ್ಯದಷ್ಟೇ ಸತ್ಯ' ಎಂದು ನಂಬಿಸಿ ಬಿಡುತ್ತಾರೆ. ಪತ್ರಿಕೋದ್ಯಮದ ನೀತಿಗೆ ಮಸಿ ಬಳಿದು ಬಿಡುತ್ತಾರೆ.

......ಗೆಳೆಯ ಸದಾ ಹೇಳುತ್ತಾನೆ. "ನಿನಗೆ ಎರಡು ಎಕರೆ ಭೂಮಿಯಿದ್ದರೆ ಹಳ್ಳಿಗ್ಹೋಗಿ ಮರ್ಯಾದೆಯಿಂದ ಬದುಕು. ನನ್ನ ನಿನ್ನಂಥ ಪ್ರಾಮಾಣಿಕರಿಗೆ ಮೇಲಿನವರು ಎಂದೋ ತಿಲಾಂಜಲಿ ಇಟ್ಟಿದ್ದಾರೆ. ಅತ್ಯಾಚಾರ ಮಾಡಿದ್ದಾರೆ, ಜಾತಿ, ಮತ, ಧರ್ಮ, ವ್ಯಕ್ತಿಪ್ರಧಾನರಂತೆ ವರ್ತಿಸಿ ಭ್ರಷ್ಟಗೊಂಡಿದ್ದಾರೆ. ನಮ್ಮಂಥವರು ಮಾಡುವ ಉದ್ಯಮ ಪ್ರಾಮಾಣಿಕತೆಯಿರುವಂತಾಗಬೇಕಾದರೆ ಈ ಶಾಸಂತ್ರನಿಗರು ಬುದ್ಧಿ ಕಲಿಯಬೇಕು, ಇಲ್ಲಾ ನಾಶವಾಗಬೇಕು" ಎಂದು ನೋವಿನಿಂದ ನುಡಿಯುತ್ತಾನೆ. ಇಂಥವರ ಮಧ್ಯೆ ನಾವೇನು ಮಾಡಲು ಸಾಧ್ಯ" ಎನ್ನುತ್ತಾನೆ. ಅವನ ಅಂತರಾಳದಲ್ಲಿ ಇಂಥ ಸಾವಿರಾರು ಪ್ರಶ್ನೆ ಉತ್ತರ ಕಾಣದ ಸಮಸ್ಯೆಗಳಾಗಿ ಕಾಡುತ್ತವೆ.

ಒಂದು ಕಡೆ ಈ ಎರಡೂ ಅಂದರೆ ಪ್ರಾಮಾಣಿಕ ಮತ್ತು ಭ್ರಷ್ಟ ವರದಿಗಾರರಿಂದ ಇಡೀ ಪತ್ರಿಕೋದ್ಯಮ ನಾಶವಾಗುತ್ತದೆ. ಒಬ್ಬ ಪ್ರಾಮಾಣಿಕ ವರದಿಗಾರ ಭ್ರಷ್ಟ

ವರದಿಗಾರರ ಮಧ್ಯೆ ಹೆಣಗದೆ ನಿರಾಶಾವಾದಿಯಾಗಿ ಮರ್ಯಾದೆಯಿಂದ ನೇಪಥ್ಯಕ್ಕೆ ಸರಿದರೆ ಭ್ರಷ್ಟ ವರದಿಗಾರ ಇಡೀ ಮಾಧ್ಯಮವನ್ನೇ ಬಳಸಿಕೊಂಡು ಭ್ರಷ್ಟಗೊಳಿಸಿಬಿಡುವುದರಿಂದ ಇಡೀ ಉದ್ಯಮವನ್ನೇ ನಾಶಪಡಿಸಿಬಿಡುತ್ತಾನೆ.

ಪ್ರಾಮಾಣಿಕ ಬರಹಗಾರನ ಬರಹ ಕಸದ ಬುಟ್ಟಿ ಸೇರಿದರೆ ಭಾನಗಡಿ ವರದಿ ಮುದ್ರಣಗೊಳ್ಳುತ್ತದೆ. ಭ್ರಷ್ಟ ರಾಜಕಾರಣಿಯನ್ನು ಪ್ರಾಮಾಣಿಕನೆಂದು ಬರೆದು ಬರೆದು ಓದುಗ ಸಮೂಹವನ್ನೇ ಮೋಸಗೊಳಿಸಿಬಿಡುತ್ತದೆ. ಇಲ್ಲಿ ಸತ್ಯ ಸತ್ತರೆ ಅಸತ್ಯ ಜೀವಂತವಾಗುತ್ತದೆ. ಇದೆಲ್ಲಾ ತಾತ್ಕಾಲಿಕವಾದರೂ ಪ್ರಾಮಾಣಿಕ ವರದಿಗಾರ ಚೇತರಿಸಿಕೊಳ್ಳುವಷ್ಟೊತ್ತಿಗೆ ನಿರಾಶಾವಾದಿಯಾಗಿ ಬಿಟ್ಟಿರುತ್ತಾರೆ.

---

## ಸಂಭ್ರಮ

ಕೇಳಿದ್ರ —ಈಶ್ವರಯ್ಯ ಮಠ
ನಾ ನಿಮಗ ಪ್ರೀತಿಸೋದಿಲ್ಲ ಅಂತಿ
ಮತ್ಯಾಕ ನನಗ ನೋಡಿ
ಮುಗಿಲ ಕಂಡ ನವಿಲಿನ್ಹಾಂಗ ಸಂಭ್ರಮದಿಂದ ಬೀಗತಿ

## ಮಳ್ಳಿ–ಮಳ್ಳ

ನಾ ನಿನ್ನ ಹತ್ರ ಬಂದಾಗ
ಏನೂ ಗೊತ್ತಿಲ್ದ 'ಮಳ್ಳಿ' ಹಾಂಗ ಮಾಡ್ತಿ
ನಾ ತಿರಗಾ ಹೊಂಟ ಕೂಡ್ಲೇ
ಒಳ್ಳಿ ಒಳ್ಳಿ ನೋಡಿ ನನಗ 'ಮಳ್ಳ' ಹಿಡಸ್ತಿ

## ಭಾಷಣ

ಅದೆಷ್ಟು ಹುಡ್ಗೇರ ಮುಂದ ನಾ
ಭಾಷಣ ಬಿಗದಿಲ್ಲs......?
ಆಕೀನ ನೋಡಿದ ಕೂಡ್ಲೇ
ಯಾಕೋ ಏನೋ ಮಾತೇ ಬರಾಂಗಿಲ್ಲ

## ಗೀಳ

ಕದಿಯೋ ಚಟಾ ಸುಮಾರ
ಅಂಬೂದ ನಿನಗೂ ಗೊತ್ತೈತಿ
ಅಂದ ಮ್ಯಾಲ.
ನನ ಹೃದಯಾ ಕದಿಯೋ ಗೀಳ
ನಿನಗ್ಯಾಕ ಹತ್ತೈತಿ ?

# ದಾನಿ



ಎಂ. ಸಿ. ಅಂಟಿನ

ಪ್ರೊ. ಟಿ. ಎ. ಪಾಟೀಲರು ಹುಬ್ಬಳ್ಳಿಯ ಬಸ್ ನಿಲ್ದಾಣದಲ್ಲಿ ಬೆಳಗಾವಿಯ ಬಸ್ಸಿನ ದಾರಿ ಕಾಯುತ್ತ ನಿಂತಿದ್ದರು. ವ್ಯವಸ್ಥಿತವಾಗಿ ಡ್ರೆಸ್ ಮಾಡಿ, ಕೈಯಲ್ಲೊಂದು ಪುಟ್ಟ ಬ್ರೀಫ್‌ಕೇಸನ್ನು ಹಿಡಿದ ಪ್ರೊ. ಪಾಟೀಲರಿಗೀಗ ಐವತ್ತರ ಎಡಬಲದ ವಯಸ್ಸು. ವಯಸ್ಸಿಗೆ ತಕ್ಕಂತೆ ಅವರು ಹಲವಾರು ವಿಚಾರಗಳ ಸುಳಿಯಲ್ಲಿ ಸಿಕ್ಕವರಂತಿದ್ದರು,

ಪಿ.ಯು.ಸಿ. ಎರಡನೆಯ ವರ್ಷದಲ್ಲಿ ನೂರಕ್ಕೆ ಎಪ್ಪತ್ತಾರು ಗುಣಗಳನ್ನು ಗಳಿಸಿದ್ದ ತಮ್ಮ ಮಗ ಈಗ ಎಂಟ್ರನ್ಸ ಪರೀಕ್ಷೆಗೆ ಕುಳಿತು ತನ್ನ ಜೀವನದ ಅತ್ಯಂತ ಮಹತ್ವದ ಕವಲಿನಲ್ಲಿ ನಿಂತಿದ್ದ, ಅವಶ್ಯ ಮೆರಿಟ್ ಇಲ್ಲದ್ದರಿಂದ ಎಂಜಿನಿಯರಿಂಗ ಕಾಲೇಜಿನಲ್ಲಿ ಸೀಟು ದೊರೆಯುವಂತಿಲ್ಲ. ಡೋನೇಶನ್ ಕೊಟ್ಟು ಕಲಿಸಬೇಕೆಂದರೆ ತಮ್ಮಲ್ಲಿ ಅಷ್ಟೊಂದು ಬ್ಯಾಂಕ್ ಬ್ಯಾಲೆನ್ಸ ಇಲ್ಲ. ಸಾಲವಾದರೂ ಮಾಡಿ ಸೀಟು ಗಿಟ್ಟಿಸಿಕೊಳ್ಳದಿದ್ದರೆ ಮಗನ ಜೀವನವೇ ಗಕಣಾದಂತಾಗುತ್ತದೆ. ಶಾಂತಿ ನಗರದಲ್ಲಿ ತಾವು ಕಟ್ಟಿಸುತ್ತಿರುವ ಮನೆ ಬರೆ ಅರ್ಧಕ್ಕೇ ನಿಂತಿದೆ. ಮೇಲಾಗಿ ಬೆಳೆದು ನಿಂತ ಮಗಳ ಮದುವೆಯನ್ನು ಆದಷ್ಟು ಬೇಗ ಮಾಡಲು ತಮ್ಮಾಕೆ ದುಂಬಾಲು ಬಿದ್ದಿದ್ದಾಳೆ. ರಿಟೈರಮೆಂಟ ಏಜನ್ನು ಅರವತ್ತಕ್ಕೇರಿಸುವ ಭರವಸೆಯನ್ನು ಸರಕಾರ ಕೊಡಲೊಲ್ಲದು. ಹೀಗೆ ಹಲವು ಹನ್ನೊಂದು ವಿಚಾರಗಳಲ್ಲಿ ಪ್ರೊ. ಪಾಟೀಲರು ಮಗ್ನರಾಗಿದ್ದರು.

"ಎಪ್ಪಾ, ತಂದೆ, ದಾನಾ ಮಾಡ್ರಿ ನಿಮ್ಮ ಕಾಲ ಬೀಳ್ತೀನಿ" ಎಂಬ ಆರ್ತಧ್ವನಿ ಪ್ರೊ. ಪಾಟೀಲರ ಮಗ್ನತೆಯನ್ನು ಭಗ್ನಗೊಳಿಸಿತು.

ದೀನನಾಗಿ ಕೈಜೋಡಿಸಿ ನಿಂತ ಮಧ್ಯಮ ವಯಸ್ಸಿನ ಹಳ್ಳಿಯ ರೈತನೊಬ್ಬನನ್ನು ಒಂದು ಸಲ ಆಪಾದ ಮಸ್ತಕ ನೋಡಿ ಮುಖ ಬೇರೆಡೆ ತಿರುವಿ ನಿಂತರು ಪ್ರೊ. ಪಾಟೀಲರು.

"ಎಪ್ಪಾ ಸಾಹೇಬ್ರ, ದಯಾ ತೋರಿಸ್ರಿ ನಮ್ಮಾಕಿ ದವಾಖಾನ್ಯಾಗ ಬಿದ್ದಾಳ್ರಿ. ನಾಳಿಂದ ನಾಳೀ ಆಕಿಗೆ ಆಪರೇಶನ್ ಮಾಡಿಸದಿದ್ರ ಆಕಿ ನಮಗ ದಕ್ಕೂದಿಲ್ಲಂತ್ರಿ ರೊಕ್ಕ ಬಾಳ ಬೇಕು. ತಗೊಂಡ ಬಾ ಅಂದಾರ್ರಿ. ನಾ ಬಡವ ಊರಿಗೆ ಹೋಗಾಕೂ ನನ್ನ ಕಡೆ ರೊಕ್ಕ ಇಲ್ರಿ. ಮನ್ಯಾಗ ಮೂರ ಮಕ್ಕಳದಾರ್ರಿ, ಅವರನ್ನ ಪರದೇಶಿ ಮಾಡಬಾರದಂತ ಊರಿಗೆ ಹೋಗಿ ಮನ್ಯಾಗಿನ ಹಂಡೆ-ಭಾಂಡೆ ಮಾರಿ, ಮನಿ ಅಂಗಡಿ ಸಾವಕಾರಗ ವತ್ತಿ ಜಗದ ರೊಕ್ಕಾ ತರಬೇಕಂತ ಮಾಡೇನ್ರೀಯಪ್ಪಾ. ನಿಮ್ಮ ಮಕ್ಕಳಿಗೆ ಪುಣ್ಣ ಹತ್ತ್ಯತಿ ಮೂರ ರೂಪಾಯಿ ಕಡಿಮಿ ಬಿದ್ದ್ಯಾವ್ರಿ ಸಾಹೇಬ್ರ ಅಷ್ಟ ಕೊಟ್ಟ ಉಪಕಾರ ಮಾಡ್ರಿ" ಎಂದು ತನ್ನ ಕೊಳಪಾಟವನ್ನೇ ತೋಡಿಕೊಂಡ.

ದೊಡ್ಡ ದೊಡ್ಡ ನಗರಗಳಲ್ಲಿ ಎಂಥೆಂಥದೊ ಸೋಗು ಹಾಕಿ, ನೂರೆಂಟು ಸುಳ್ಳುಹೇಳಿ ಹಣ ಸುಲಿಯುವ ಉದ್ದಿಮೆಯನ್ನು ಕೈಕೊಂಡವರ ವಿಷಯ ಪ್ರೊ. ಪಾಟೀಲರಿಗೆ ತಿಳಿದಿತ್ತು.

ಪಾಪ ಭಿಕ್ಷುಕ ಹತ್ತಿಪ್ಪತ್ತು ಪೈಸೆ ಕೊಟ್ಟು ಕಳಿಸಬೇಕೆಂದರೆ ಈತ ಮೂರು ರೂಪಾಯಿಗಳನ್ನು ಕೇಳುತ್ತಿರುವುದನ್ನು ಕಂಡು ಚಿಲ್ಲರೆಗಾಗಿ ಜೇಬಿನಲ್ಲಿ ಹಾಕಿದ ಕೈಯನ್ನು ಹೊರ ತೆಗೆದು "ಏ ನಡಿ ಮುಂದ. ಎಲ್ಲೆಲ್ಲಿಂದ ಬರತೀರಿ ನೀವೆಲ್ಲ! ಮೂರು ರೂಪಾಯಿ ಕೊಡಬೇಕಂತ ಈ ಬಾಜೀರಾವಗ. ನಿಮ್ಮಪ್ಪ ಮೊದಲೇ ನನ್ನ ಕೈಯೊಳಗ ಕೊಟ್ಟ ಇಟ್ಟಾನಲ್ಲಿ ಈಗ ನಾನು ನಿನಗ ಕೊಡತೇನಿ ನಡಿ ಮುಂದ" ಎಂದು ಅವನನ್ನು ಜರೆಯುತ್ತ ಭಿಕ್ಷಾ ಬೇಡುವ ಸೂಳೆ ಮಕ್ಕಳೂ ಈಗೀಗ ತಮ್ಮ ಸ್ಟ್ಯಾಂಡರ್ಡ ಹೈ ಮಾಡಿ ಕೊಂಡಾರ ! ಈ ಇಯಟ್ ಚೀಟ್ಸ ! ಅಬಬ, ಏನ ನಾಟಕ ಮಾಡತಾನ !...ಇವನ ಹೆಂಡತಿನ್ನ ಹಾಸ್ಪಿಟಲ್ಲಿ ಇಟ್ಟಾರಂತ ಅರ್ಜಂಟ ಆಪರೇಶನ್ ಮಾಡಿಸಬೇಕಂತ ಊರಿಗೆ ಹೋಗಲಿಕ್ಕೆ ರೊಕ್ಕ ಕಡಿಮಿ ಬಿದ್ದಾವಂತ ಅದಕ್ಕ ನಾನೇನು ಮಾಡಬೇಕು ? ನಮಗೂ ನೂರೆಂಟು ಪ್ರಾಬ್ಲೆಮ್ಸ ಇರತಾವ...ಎಂದು ಗೊಣಗಿಸತೊಡಗಿದರು.

"ಇಲ್ಲ ಅನ್ನಬ್ಯಾಡ್ರಿ ನನ್ನಪ್ಪ. ಗಾಡಿಗೆ ವಳಿ ಆಗೇತ್ರಿ. ನಮ್ಮೂರು ಹಾನಗಲ್ಲಿಗೆ ಹೋಗಿ ರೊಕ್ಕಾ ಹೊಂದಿಸಿಕೊಂಡು ಗಡಾನ ಬರಬೇಕ್ರಿ ನಾನು ನಿಮ್ಮಂಥವರಿಲ್ಲಂದ್ರ ಈಗ ನನ್ನ ಕೈಯಾರ ಹಿಡಿಬೇಕ್ರಿಯಪ್ಪಾ ? ನನ್ನ ಮಕ್ಕಳ್ನ ಪರದೇಶಿ ಮಾಡಬ್ಯಾಡ್ರಿ ದೇವ್ರು ನಿಮ್ಮ ಕಾಲ ಬೀಳ್ತೇನಿ" ಎಂದು ಪ್ರೊ. ಪಾಟೀಲರ ಪಾದಗಳನ್ನೇ ಹಿಡಿಯ ಹೋದ.

"ಏ ಫೂಲ್ ! ದೂರ ಸರ" ಎಂದೆನ್ನುತ್ತ ಪ್ರೊ. ಪಾಟೀಲ ಸಾಹೇಬರು ತಾವೇ ಎರಡು ಹೆಜ್ಜೆ ಹಿಂದೆ ಸರಿದು ನಿಂತರು.

ಕೆಲ ದಿವಸಗಳ ಹಿಂದೆಯಷ್ಟೇ ಹೆತ್ತ ತನ್ನ ಕೂಸೊಂದನ್ನು ಮೊರದಲ್ಲಿ ಕಟ್ಟಿಕೊಂಡು ಬೆಳಗಿನಿಂದ ಭಿಕ್ಷೆ ಬೇಡುತ್ತಿದ್ದ ಬಾಣಂತಿ ಇದನ್ನೆಲ್ಲ ನೋಡುತ್ತಿದ್ದಳು. ಆತನು ಭಿಕ್ಷುಕನಲ್ಲವೆಂಬುದನ್ನು ಅರಿತ ಆಕೆ ಕಣ್ಣು ತುಂಬ ನೀರು ತಂದು "ಎಣ್ಣಾ. ಇಕಾ ನನ್ನ ಕಡೆ ಇಷ್ಟ ರೊಕ್ಕ ಕೂಡೇತಿ ಹಾಕ್ಯಂದ ತಗೊಂಡ ಹೋಗಿ ಗಡಾನ ಹಾನಗಲ್ಲ ಬಸ್ ಹತ್ತು. ಕಡೀ ಬಸ್ಸು ಬಿಡುವ ವೇಳೇ ಆತು. ಡ್ರಾಯವರ ಸಾಬ್ರು ಹಾರ್ನ ಬಾರಸಾಕ ಹತ್ಯಾರ ಅವಸರಾ ಮಾಡ ಎಣ್ಣಾ" ಎಂದು ತಾನು ಬೆಳಗಿನಿಂದ ಭಿಕ್ಷೆ ಬೇಡಿ ಗಳಿಸಿದ ಎರಡು ಮೂರು ರೂಪಾಯಿಯಷ್ಟು ಚಿಲ್ಲರೆ ಹಣವನ್ನೆಲ್ಲ ಆಕೆ ಅವನ ಬೊಗಸೆಯಲ್ಲಿ ಹಾಕಿ ಸೆರಗಿನಿಂದ ಕಣ್ಣು ಮೂಗು ಒರೆಸಿಕೊಂಡಳು.

ಅನಿರೀಕ್ಷಿತ ಸಹಾಯದಿಂದ ಆತನ ಹೃದಯ ತುಂಬಿಬಂದಿತು. ಕಣ್ಣುಗಳ ಒಡಲುಗಳು ತುಂಬಿಬಂದವು. ಗಕ್ಕನೆ ಬಾಗಿ ಆವಳ ಪಾದಗಳನ್ನು ಮುಟ್ಟಿ 'ಬರ್ತೇನ ತಂಗಿ' ಎಂದೆನ್ನುತ್ತ ಹಾನಗಲ್ಲಿಗೆ ಹೊರಟ ಬಸ್ಸನ್ನು ಓಡುತ್ತ ಏರಿದನು.

---



---

ಸಣ್ಣ ಕಥೆ

# "ರಂಗಣ್ಣನ ಬಸ್ಸು"

○○

### · ಸಿದ್ಧರಾಮ ಹೊನ್ಕಲ್

ಬಿಟ್ಟು ಬಿಡದೇ ನಡೆಯುವ ಅತ್ಯಾಚಾರಕ್ಕೆ ಬಲಿಯಾದ ಅಸಹಾಯಕ ಹೆಂಗಸಿನಂತೆ ರಸ್ತೆ ಅಂಗಾತವಾಗಿ ಚಾಚಿಕೊಂಡಿತ್ತು. ಕಾಲರಾ ರೋಗಿ ವಾಂತಿ ಮಾಡಿಕೊಂಡಂತೆ ಬೆಳದಿಂಗಳು ಚೆಲ್ಲಿಕೊಂಡಿತ್ತು. ಇಂತಹ ರಸ್ತೆ ಹಾಗೂ ವಾತಾವರಣದಲ್ಲಿ ಸಾಗಿದ್ದ ರಂಗಣ್ಣನ ಬಸ್ಸಿನಲ್ಲಿ ಸಾಕಷ್ಟು ಸೀಟುಗಳು ಖಾಲಿಯೇ ಇದ್ದವು. ಧರ್ಮದ ಹಳ್ಳಿಗೆ ಹೋಗಿ ಅಲ್ಲಿ ಮೊಕ್ಕಾಂ ಮಾಡಿ ಬೆಳಿಗ್ಗೆ ನಗರಕ್ಕೆ ಹಿಂದಿರುಗಿದರೆ ಅಲ್ಲಿಗೆ ರಂಗಣ್ಣನ ಅಂದಿನ ಡ್ಯೂಟಿ ಮುಗಿಯುತ್ತಿತ್ತು. ಮೊಕ್ಕಾಂ ಮಾಡುವ ಧರ್ಮದ ಹಳ್ಳಿಯವನೇ ಆದ ರಂಗಣ್ಣನು ಆ ರೂಟಿನ ಕಾಯಂ ಡ್ರೈವರ. ಹಾಗಾಗಿ ನಿತ್ಯ ಸಂಚರಿಸುವವರಿಗೆ ಆ ಬಸ್ಸು, ಆ ರಂಗಣ್ಣ ತೀರ ಚಿರಪರಿಚಿತರು. ಹಾಗಾಗಿ ಅದನ್ನು "ರಂಗಣ್ಣನ ಬಸ್ಸು" ಎಂದೇ ಗುರ್ತಿಸಲಾಗುತ್ತಿತ್ತು.

ಸರಿಯಾದ ಸಮಯಕ್ಕೆ ಬಿಟ್ಟರೆ ಅದಕ್ಕೆ ಸರ್ಕಾರಿ ಬಸ್ಸು ಎಂದು ಯಾರು ಕರೆಯುತ್ತಾರೆ! ರಂಗಣ್ಣ ನಿತ್ಯದಂತೆ ಇಂದೂ ತಡವಾಗೇ ಹೊರಟಿದ್ದ, ಆದರೆ ಕಳೆದ ಎರಡು ದಿನಗಳಿಂದ ಬಂಧುಗಳೊಬ್ಬರ ಮದುವೆಗಾಗಿ ಕಲಬುರ್ಗಿಗೆ ಹೋಗಿದ್ದ ಹೆಂಡತಿ ಕಮಲಮ್ಮ ಮತ್ತು ತಂದಿ ಚೆನ್ನಮಲಪ್ಪ ಇಂದು ಮಧ್ಯಾಹ್ನವೇ ಊರಿಗೆ ಹಿಂದಿರುಗುವವರಿದ್ದರು. ಹಾಗಾಗಿ ಬೇಗ ಮನಿ ಸೇರಿ ಹೆಂಡತಿ ಮಕ್ಕಳ ಮುಖ ನೋಡುವ ಇಚ್ಛೆಯಿಂದ ರಂಗಣ್ಣ ಇಂದು ನಿತ್ಯಕಿಂತ ಸ್ವಲ್ಪ ಕಡಿಮೆ ತಡವಾಗಿ ಬಿಟ್ಟಿದ್ದ.

ಮುಂದಿನ ತಿರುವಿನಲ್ಲಿ ಧರ್ಮದ ಹಳ್ಳಿಗೆ ಹೋಗುವ ಕೂಡು ರಸ್ತೆಯವರೆಗೆ ಮಾತ್ರ ಹೆದ್ದಾರಿ. ಅಲ್ಲಿಂದ ಕಚ್ಚಾ ರಸ್ತೆಯಲ್ಲಿ ಎಂಟು ಕಿ. ಮಿ. ಓಡಿಸಿದರೆ ಧರ್ಮದ ಹಳ್ಳಿ ಬರ್ತಿತ್ತು. ಬಸ್ಸು ಡಿಪ್ಪೋದಿಂದ ಹೊರಗೆ ಬರುವಾಗ ನಿತ್ಯ ಡೀಸೆಲ್ ತುಂಬಿಸಿ

ಕೊಂಡು ಹೊರಬರುವಂತೆ, ಗಾಡಿ ಬಿಡುವ ಮುಂಚೆ ತನ್ನ ಇಂಜಿನ್‌ಗೂ ಸ್ವಲ್ಪ 'ಎಣ್ಣೆ' ಹಾಕಿಕೊಂಡು ಹೊರಡುವದು ರಂಗಣ್ಣನ ನಿತ್ಯದ ವಾಡಿಕೆ. ಹಾಗಾಗಿ ಕೂಡು ರಸ್ತೆ ಬರುವವರೆಗೆ ಮಾತ್ರ ಸ್ವಲ್ಪ ಹುಷಾರಿಯಿಂದ ಬಸ್ಸು ಓಡಿಸುತ್ತಿದ್ದ. ಹೆದ್ದಾರಿ ಮುಗಿದು ಕೂಡು ರಸ್ತೆಯಿಂದ ಕಚ್ಚಾ ರಸ್ತೆ ಆರಂಭವಾದರೆ ಸಾಕು ರಂಗಣ್ಣನ ಬಸ್ಸು 'ರೋಡಕಿಂಗ್' ಆಗಿಬಿಡುತ್ತಿತ್ತು. ಆ ರಸ್ತೆಯಲ್ಲಿ ಬೆಳಗ್ಗೆ ನಗರಕ್ಕೆ ಹಿಂದಿರುಗುವದು ಮತ್ತು ರಾತ್ರಿ ನಗರದಿಂದ ಧರ್ಮದ ಹಳ್ಳಿಗೆ ಸಂಚರಿಸುವದಕ್ಕೆ ಏಕೈಕ ವಾಹನ ಅದಾಗಿತ್ತು. ಆಗೀಗ ಯಾವುದಾದರು ಅಪರೂಪಕ್ಕೆ ಪಿ.ಡಬ್ಲು.ಡಿ.ಯ ಟ್ರಕ್‌ಗಳು ಮಾತ್ರ ಆ ರಸ್ತೆಯಲ್ಲಿ ಓಡಾಡುತ್ತಿದ್ದುದರಿಂದ ಉಳಿದ ಸಮಯದಲ್ಲಿ ಜನ ಕೂಡು ರಸ್ತೆಯಿಂದ ನಡೆದುಕೊಂಡೇ ತಿರುಗಾಡಬೇಕಾಗುತ್ತಿತ್ತು.

ಹೆದ್ದಾರಿ ಮುಗಿದು ಕೂಡು ರಸ್ತೆಗೆ ಹೊರಳಿ ಧರ್ಮವಹಳ್ಳಿ ಕಡೆ ಹೋಗುವ ಕಚ್ಚಾ ರಸ್ತೆಯ ಸಮೀಪ ಬಸ್ಸು ಬಂದಾಗ ಬಸ್ಸಿಗೆ ಎದುರುದಿಕ್ಕಿನಿಂದ ಕೆಲಜನ ನಿಲ್ಲಿಸಿ ಎನ್ನುವಂತೆ ಕೈ ಮಾಡುತ್ತ ಓಡಿ ಬರುತ್ತಿರುವದು ಕಾಣಿಸುತ್ತಿತ್ತು. ಆದರೆ ಅದಾಗಲೇ ರಂಗಣ್ಣನ ಒಳಗೆ ಪ್ರವೇಶ ಮಾಡಿದ್ದ 'ಕುತ್ತಾಭಾಪ' ತನ್ನ ಕೆಲಸ ಆರಂಭಿಸಿತ್ತು ಕಾಣಸ್ತದ. ಹಾಗಾಗಿ ಡ್ರೈವರ ರಂಗಣ್ಣ ಬಸ್ಸಿಗೆ ಬ್ರೆಕ್ ಹಾಕುವ ಕೃಪೆ ಮಾಡದೇ ಹೆದ್ದಾರಿಯಿಂದ ಬಲಮಗ್ಗಲ ಕಚ್ಚಾ ರಸ್ತೆಗೆ ತಿರುವಿಕೊಂಡು ವೇಗ ಹೆಚ್ಚಿಸಿದ. ಇದನ್ನು ಕಂಡ ಬಸ್ಸಿನಲ್ಲಿಯ ಪ್ರಯಾಣಿಕನೊಬ್ಬ ಕಾಳಜಿಯಿಂದ "ಡ್ರೈವರ್ ಸಾಹೇಬ್ರೆ, ಯಾರೋ ಹೆಣ್ಮಗಳು ಮತ್ತು ಗಂಡ ಮನುಷ್ಯಾ ಓಡಿ ಬರಲಾಕ್ ಹತ್ಯಾರ್ರಿ. ಸ್ವಲ್ಪ ನಿಂದ್ರಸ್ರಿ. ಯಾರೋ ನಮ್ಮೂರೋರ ಇರ್ಬೇಕು ಇದು ಬಿಟ್ರ ಬ್ಯಾರೆ ಬಸ್ಸ ಇಲ್ಲ" ಎಂದಾಗ ಸಿಟ್ಟು ಮುಖ ಮಾಡಿಕೊಂಡ ರಂಗಣ್ಣ ತನ್ನ ಇಲಾಖೆ ಭಾಷೆಯಲ್ಲಿ "ನಿನಗ ಯಾಕ ಬೇಕೋ ಸುಮ್ನ ಕುಂದ್ರಲಾಕ ಬರೋದಿಲ್ಲೇನ. ಅವರೇನು ನಿಮ್ಮಪ್ಪ-ನಿಮ್ಮವ್ವ ಆದಾರ ಏನು ? ನಮ್ಮ ಸಂಕಟ ನಿಮಗೇನು ಗೊತ್ತಾಗತದ. ಅವರು ಇಷ್ಟು ದೂರಾರ. ಅಲ್ಲಿಂದ ಬರತನಕ ನಾನು ನಿಂದ್ರಸವೂ ಸಾಧ್ಯ ಇಲ್ಲ. ನಮಗೂ ಹೆಂಡ್ರು ಮಕ್ಕಳು ಸಂಸಾರ ಅದ. ಹಿಂಗ ನಿಂತಗಂತ ಹೋದರ ನಮ್ಮ ಡ್ಯೂಟಿ ಮುಗಿದಂಗೆ ಆಗ್ತದ" ಎಂದು ಅಲಕ್ಷದಿಂದ ಉತ್ತರಿಸುತ್ತ ಕೆಕ್ಕರುಗಣ್ಣಿಂದ ಆಗಾಗ ಹಿಂದಕ್ಕೆ ದಿಟ್ಟಿಸುತ್ತಲೇ ಬಸ್ಸು ಓಡಿಸತೊಡಗಿದ.

ಧರ್ಮದಹಳ್ಳಿ ತಲುಪಿದ ರಂಗಣ್ಣ ನಿತ್ಯದಂತೆ ಕಂಡಕ್ಟರನಿಗೆ ಬಸ್ಸಿನಲ್ಲಿಯೇ ಮಲಗಲು ತಿಳಿಸಿ ತನ್ನ ಮನೆಯಡೆಗೆ ನಡೆದ. ಮದುವೆಗಾಗಿ ಕಲಬುರ್ಗಿಗೆ ಹೋಗಿದ್ದ ಮಡದಿ ಕಮಲಮ್ಮ ಮತ್ತು ತಂದಿ ಚೆನ್ನಮಲ್ಲಪ್ಪ ಊರಿನಿಂದ ಹಿಂದಿರುಗಿರಲಿಲ್ಲ.

ಬೀಗರು ಒತ್ತಾಯ ಮಾಡಿ ಉಳಿಸಿಕೊಂಡಿರಬೇಕೆಂದು ಭಾವಿಸಿಕೊಂಡ ರಂಗಣ್ಣ ಉಂಡ ಶಾಸ್ತ್ರ ಮಾಡಿ ಮಲಗಿದ.

o o o

ಬೆಳಗ್ಗೆ 'ಧರ್ಮದಹಳ್ಳಿ'ಯಿಂದ ನಗರಕ್ಕೆ ಹಿಂದಿರುಗುತ್ತಿದ್ದ ಬಸ್ಸು ಹೆದ್ದಾರಿಯ ಕೂಡು ರಸ್ತೆಗೆ ಬಂದಾಗ ಹೆದ್ದಾರಿಯ ಮಧ್ಯ ಗುಂಪಾಗಿ ಜನ ಸೇರಿದ್ದು ಕಂಡು ರಂಗಣ್ಣ "ಥೂ...ಮುಂಜಿ ಮುಂಜಾನೆ ಯಾ, ಸೂ. ಮಗ ಬಸ್ಸಿನ್ಯಾಗ ಬಿದ್ದ ಸತ್ತನಪ, ಇಷ್ಟು ಮಂದಿ ಸೇರ್‍ಯಾರಲ್ಲಿ. ಪೈಲ್ಯಾಗ ಎಚ್ಚರ ಇಲ್ದ ತಿರುಗಾಡತಾರ" ಎಂದು ಬಯ್ದು ಕೊಳ್ಳುತ್ತಲೇ ಬಸ್ಸು ನಿಲ್ಲಿಸಿ ಬೀಡಿ ಹಚ್ಚಿಕೊಂಡು ಕೆಳಗಿಳಿದು ಗುಂಪಿನತ್ತ ಹೋದ.

ಗುಂಪಿನ ಮಧ್ಯೆ ನೆಲದಲ್ಲಿ ಅಸ್ತವ್ಯಸ್ತಳಾಗಿ ಅಂಗಾತ ಬಿದ್ದುಕೊಂಡಿದ್ದ ಹೆಂಗಸಿನ ಮುಖ ಕಾಣುತ್ತಲೇ ರಂಗಣ್ಣನ ಕೈಯಲ್ಲಿದ್ದ ಬೀಡಿ ಅವನಿಗರಿವಿಲ್ಲದೇ ಕೆಳ ಬಿತ್ತು. ಆಕೆಯಿಂದ ಸ್ವಲ್ಪ ಅಂತರದಲ್ಲಿ ಮಧ್ಯ ವಯಸ್ಸಿನೊಬ್ಬ ಬಿದ್ದುಕೊಂಡಿದ್ದ. ಅವರ ಕೈಚೀಲಗಳಿಂದ ಬಿದ್ದ ಸೀರೆ, ಹಣ್ಣು ಹಂಪಲುಗಳು ಅಲ್ಲಲ್ಲಿ ಚೆಲ್ಲಿಕೊಂಡಿದ್ದವು.

"ಪಾಪ ! ಯಾರೋ ರಾತ್ರಿ ಈ ಕಡೆ ಊರಿಗೆ ಹೋಗಲಾಕ ಬಂದಾರ ಕಾಣ ಸ್ತದ. ಕಳ್ಳ ಸೂ. ಮಕ್ಕು ಮೈಮ್ಯಾಗಿನ ಬಂಗಾರದ ಆಸಿಗಿ ಜೀವಾನ ಹೊಡ್ದಾರ ನೋಡ್ರಿ. ಕೈಯಾಗ ಬಳಿ, ಕೊರಳಾನ ಸರ ಜಗ್ಗ್ಯಾಡತಂತ ಕಾಣಸ್ತದ, ಮೂಗಿನ್ಯಾಗಿನ ಮುತ್ತು. ಕಿವ್ಯಾಗ ಬೆಂಡೋಲಿ ಜಗ್ಗಿ ತೆಗದಾರ ಕಾಣಸ್ತದ. ಹೆಂಗ ರಕ್ತ ಕಂದುಗಟ್ಯಾದ ನೋಡ್ರಿ ಎಲ್ಲಾ ಕಡಿ. ಪಾಪ ! ಯಾವ್ರರೋ ಏನೋ. ಧರ್ಮದಹಳ್ಳ್ಯಾರೇ ಇರ್ಬೇಕು. ಮುದುಕ ಮನುಷ್ಯ ಒಂದೇಟು ಹಾಕ್ಯಾರ ಕಾಣಸ್ತದ. ಅಷ್ಟಕ್ಕ ಜೀವಾನ ಬಿಟ್ಟಿರಬೇಕು..." ಇತ್ಯಾದಿ ಸುತ್ತಲಿನವರ ಹಲವಾರು ಮಾತುಗಳು ಡ್ರೈವರ ರಂಗಣ್ಣನಿಗೆ ಅಪ್ರಜ್ಞಾವಸ್ಥೆಯಲ್ಲಿ ಕೇಳು ಕೇಳುತ್ತಿದ್ದಂತೆಯೇ ನಿಂತಲ್ಲೇ ಪ್ರಜ್ಞೆ ತಪ್ಪಿ ಮುಗ್ಗರಿಸಿ ನೆಲಕ್ಕೆ ಬಿದ್ದ. ○

# ಸಗರ ನಾಡಿನಿಂದ ಬಂದಿರುವ ಸಾಹಿತ್ಯ ಧ್ವನಿ ಹೊಸ ದಿಕ್ಕು

ಸಗರ ನಾಡಿನ ಯುವ ಸ್ನೇಹಿತರು ಶಿವಪುರದಿಂದ ಹೊಸದಿಕ್ಕು ಎಂಬ ಸಾಹಿತ್ಯಿಕ ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆಯನ್ನು ಭಾರಿ ಸಾಹಸದಿಂದ ಹೊರತಂದಿದ್ದಾರೆ. ಮೇ ಜೂನ್ ತಿಂಗಳ ಮೊದಲ ಸಂಚಿಕೆ ಖಾಸಗಿ ಪ್ರಸಾರಕ್ಕೋಸ್ಕರ ಎಂದು ಮುದ್ರಣಗೊಂಡು ಹೊರಬಂದಿವೆ.

ಇದು ಆ ಸ್ನೇಹಿತರ ಪ್ರೇಮದ ಪ್ರಯತ್ನವಾಗಿದೆ ತಮ್ಮ ಅಭಿವ್ಯಕ್ತಿಗೋಸ್ಕರ ಒಂದು ಸಾಧನ ಬೇಕೆಂದು ಅವರು ಈ ವೇದಿಕೆಯನ್ನು ನಿರ್ಮಿಸಿಕೊಂಡಿದ್ದಾರೆ ಅವರು ಹೊರ ತಂದಿರುವ ಈ ಪತ್ರಿಕೆಯನ್ನು ಅವಲೋಕಿಸಿದರೆ ಅವರು ನಡೆದಿರುವ ದಿಕ್ಕು ಯಾವುದೆನ್ನುವುದು ಗೊತ್ತಾಗುತ್ತದೆ.

ಅವರಲ್ಲಿ ಬಹು ಅಮೂಲ್ಯ ವಸ್ತು ಇದೆಯೆನ್ನುವುದನ್ನು ಅವರು ಹೊರತಂದಿರುವ ಈ ಸಂಚಿಕೆ ತೋರಿಸಿಕೊಟ್ಟಿದೆ. ಇದರಲ್ಲಿ ಬರೆದಿರುವವರು ಬರವಣಿಗೆಗೆ ಹೊಸದಾಗಿ ಕೈ ಹಾಕಿದವರಲ್ಲ ಅವರಲ್ಲಿ ಲೇಖನ ಕಲೆಯ ಪ್ರಬುದ್ಧತೆ ಇದೆ.

ತಮ್ಮ ಪ್ರದೇಶದಲ್ಲಿ ಪ್ರತಿಭೆಗೆ ಕೊರತೆ ಇಲ್ಲ ಎನ್ನುವುದನ್ನು ಅವರು ಅರಿತಿದ್ದಾರೆ ಆ ಪ್ರತಿಭೆಗಳನ್ನು ಗುರುತಿಸುವ, ಬೆಳೆಸುವ ವೇದಿಕೆಗಳ ಕೊರತೆ ಇರುವುದನ್ನು ಅವರು ತಿಳಿದಿದ್ದಾರೆ. ಆ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಇದು ಅವರ ಧೈರ್ಯದ ಪ್ರಯತ್ನವಾಗಿದೆ.

ತಮ್ಮ ಪತ್ರಿಕೆಯು ಸಾಹಿತ್ಯ ಹಾಗೂ ಸಂಸ್ಕೃತಿಗಳ ಕ್ಷೇತ್ರಕ್ಕೆ ಸ್ಪಂದಿಸುವ ಪತ್ರಿಕೆಯಾಗಿರುವುದರಿಂದ ಅದು 'ಜನಪ್ರಿಯ' ವಾಗಲಾರದೆನ್ನುವುದನ್ನು ಅವರು ತಿಳಿದಿದ್ದಾರೆ. ಮೆಚ್ಚುವ ಜನರು ಮೆಚ್ಚುವಂಥ ಪ್ರಯತ್ನ ಅವರದಾಗಿದೆ ಸಾಹಿತ್ಯ ಸಂಸ್ಕೃತಿಗಳಂಥ ಗಂಭೀರ ವಿಷಯಗಳ ಬಗೆಗೆ ನಿರಂತರ ಚಿಂತನೆ ನಡೆಯಬೇಕು. ಸಮಾಜದಲ್ಲಿಯ ಸೃಜನ ಶೀಲತೆ ಹರಿಗಡಿಯದಂತೆ ನೋಡಿಕೊಳ್ಳುವುದು ಅಗತ್ಯವಿದೆ.

ಎಂತಲೇ ಈ ಸ್ನೇಹಿತರು ಅಂಥ ಬಳಗವನ್ನು ಕಟ್ಟಿಕೊಳ್ಳಲು ಮುಂದಾಗಿದ್ದಾರೆ. ತಮ್ಮ ದಾರಿಯಲ್ಲಿರುವ ತೊಡಕು ತೊಂದರೆಗಳೇನೆನ್ನುವುದನ್ನು ಅವರು ತಿಳಿದು ಕೊಂಡಿದ್ದಾರೆ.

ಅವರ ಈ 'ಹೊಸದಿಕ್ಕು' ಬಾಲಿಶ ಪ್ರಯತ್ನವಂತೂ ಅಲ್ಲ, ಈ ಸಂಚಿಕೆಯಲ್ಲಿ ಬಂದಿರುವ ಕಥೆ, ಲೇಖನ, ಕವಿತೆ, ವಿಚಾರ, ಸಂಶೋಧನೆಗಳು, ಅವರು ಕಳಪೆ ಆದುದನ್ನು ಕೊಡುವವರಲ್ಲ ಎನ್ನುವುದನ್ನು ತೋರಿಸಿಕೊಟ್ಟಿದೆ. ಸಿದ್ಧರಾಮ ಹೊನ್ಕಲ್ ಮೊದಲಾದವರು ಸಂಪಾದಕ ತಿಮ್ಮಯ್ಯ ಪುರ್ಲೆಯವರಿಗೆ ಬೆಂಬಲವಾಗಿ ನಿಂತಿದ್ದಾರೆ.

ಇಲ್ಲಿಯ ಕವನಗಳು ಕವಿಗಳಲ್ಲಿ ಅಸಾದೃಶ ಅಭಿವ್ಯಕ್ತಿ ಇದೆ ಎನ್ನುವುದನ್ನು ನಮಗೆ ಹೇಳುತ್ತದೆ.

ಬೆಳೆಯುವುದೇನಿದ್ದರೂ ಅದು ಬೆಂಗಳೂರು ಮೈಸೂರು ಧಾರವಾಡದಲ್ಲಿ ಮಾತ್ರ ಬೆಳೆಯುತ್ತಿದೆ ಎನ್ನುವುದನ್ನು ಈ ಸ್ನೇಹಿತರು ಸುಳ್ಳು ಮಾಡಿ ತೋರಿಸಿದ್ದಾರೆ ಮೌಲಿಕವಾದುದು ಯಾವ ನೆಲದಲ್ಲಿಯಾದರೂ ಬೆಳೆಯಬಹುದು ಎನ್ನುವುದಕ್ಕೆ ಈ ಈ ಹೊಸ ದಿಕ್ಕು ಸಾಕ್ಷಿ ಎನಿಸಿದೆ. ಈ ಪೈರು ಒಳ್ಳೆಯ ಸುಗ್ಗಿಯನ್ನು ತಂದು ಕೊಡುವ ಭರವಸೆಯನ್ನು ನೀಡಿದೆ. ಅವರು ವಿಶ್ವಾಸ ಮೂಡಿಸಿರುವ ಈ ಕೆಲಸ ಹುಲುಸಾಗಿಲಿ, ಅದಕ್ಕೆ ಶುಭವಾಗಲಿ, ಫಲ ಸಿದ್ಧಿಯನ್ನು ಕಾಣಲಿ ಎಂದು ನಾನು ನನ್ನ ಹೃದಯ ತುಂಬಿ ಹಾರೈಸುತ್ತೇನೆ.

—ಪಾಪು (ಪ್ರಪಂಚ)
೨೬-೭-೮೨

---

ವಿಡಂಬನೆ

# ನಾಮದ ಬಲ

---

## ಎಚ್. ಬಾಷಾಸಾಹೇಬ

ನಮ್ಮ ಈ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಎರಡೇ ಕಾಲಗಳು- ಒಂದು ಬಹಳ ಬಿಸಿಲು ಕಾಲ ಇನ್ನೊಂದು ಬಿಸಿಲು ಕಾಲ. ನಾವು ಸರಕಾರಿ ಕೆಲಸಗಾರರು ಅದೃಷ್ಟಶಾಲಿಗಳು. ಏಕೆಂದರೆ ಬೇಸಿಗೆ ಕಾಲದಲ್ಲಿ ಮಧ್ಯಾನ್ಹದ ತನಕ ಸರಕಾರಿ ಕಛೇರಿಗಳು. ನಾವು ಅದೃಷ್ಟವಂತರೆಂದುದಕ್ಕೆ ಕಾರಣ- ಎಲ್ಲರೂ ಸರಕಾರದ ಪ್ರಜೆಗಳೆಂದಮೇಲೆ ನಮಗೆ ಮಾತ್ರ ಅರ್ಧ ದಿನ ಕೆಲಸವೆಂದಮೇಲೆ ಸರಕಾರಕ್ಕೆ ನಾವೆಷ್ಟು ಕೃತಜ್ಞರಾಗಿರಬೇಡ !

ಇಲ್ಲಿನ ಬಿಸಿಲಿನ ವೈಶಿಷ್ಟ್ಯವೇ ಬೇರೆ. ಬೆಳಗಿನಲ್ಲಿಯೇ ಬೆವರಿನ ಸ್ನಾನ ಪ್ರಾರಂಭವಾಗಿ ದಿನವೆಲ್ಲ ಸ್ನಾನವೇ ಸ್ನಾನ. ಬಿಸಿಲಿಗೆ ಹೆದರಿ ಮಹಾಭಾರತದ ದುರ್ಯೋಧನಂತೆ ನೀರಿನಲ್ಲಿ ಅಡಗಿ ಕುಳಿತರೂ "ನೀರೊಳಗಿರ್ದೂ ಬೆಮರ್ದನುರಗ ಪತಾಕಂ" ಎಂಬ ಮಾತು ನಿಜವಾಗುತ್ತದೆ. ಬೆವರಿನಲ್ಲಿ ತೋಯು ಬಿಸಿಲಿನಲ್ಲಿ ಒಣಗಿದ ಬಟ್ಟೆಗಳು ಚರ್ಮದಲ್ಲಿ ಹೊಲಿಸಿದವೇನೋ ಎನ್ನುವಂತಿರುತ್ತವೆ. ಬಟ್ಟೆಗಳ ಮೇಲೆ ಹಿಡಿ ಹಿಡಿ ಉಪ್ಪು ಜಮಾ ಆಗಿರುತ್ತದೆ ಗಾಳಿ ಬೀಸುವುದಿಲ್ಲ. ಬೀಸಿದರಂತೂ ಕೆಂಡವನ್ನೇ ಮೈ ಮೇಲೆರಚಿದಂತಾಗುತ್ತದೆ. ಕೆಲವರು ಚಪ್ಪಲಿ ಮೆಟ್ಟುವುದಿಲ್ಲವೆಂದು ಹರಕೆ ಹೊತ್ತಿರುತ್ತಾರಂತೆ. ಅಂಥವರಿಗೆ ಕೆಲವು ಹಬ್ಬಗಳಲ್ಲಿ ಕೆಂಡ ತುಳಿಯುವ ಹರಕೆ ಹೊತ್ತವರ ಅನುಭವ ಹೆಜ್ಜೆ ಹೆಜ್ಜೆಗೂ ಆಗುತ್ತದೆ. ಇಂತಹ ಬೇಸಿಗೆಯಲ್ಲಿ ಉರುಳು ಸೇವೆ ಹರಕೆ ಹೊತ್ತರೆ ಹೇಗೆ ? ಭಕ್ತಿಯ ಸತ್ವ ಪರೀಕ್ಷೆಯಾದರೂ ಆಗುತ್ತದೆ. ಗೆದ್ದ ಭಕ್ತನಿಗೆ ನೇರವಾಗಿ ಸ್ವರ್ಗಕ್ಕೆ ರಹದಾರಿಯಾದರೂ ಸಿಗುತ್ತದೆ. ಎಳೆ ಬಿಸಿಲು ಕಾಯಿಸಿದರೆ ದೇಹಕ್ಕೆ ವಿಟಮಿನ್ ಸಿಗುತ್ತದಂತೆ. ಇಂತಹ ಬಿಸಿಲು ಕಾಯಿಸಿದರೆ ಏನು ಸಿಗಬಹುದು? ಡಾಕ್ಟರನ್ನೇ ಕೇಳಬೇಕು.

ಪ್ರಮೋಶನ್ ಲಿಸ್ಟ್‌ನಲ್ಲಿ ತಳದಲ್ಲಿದ್ದ ವ್ಯಕ್ತಿಗೆ ಸ್ಪೆಷಲ್ ಗ್ರೇಡ್ ಸಿಕ್ಕಿ ನನಗೆ ಮಾತ್ರ ಈ ಎದುರಿಗೆ ಕಾಣುವ ಬಿಸಿಲ್ಗುದುರೆಂತಾಯಿತಲ್ಲ ಎಂದುಕೊಳ್ಳುತ್ತಾ ಮೆಲ್ಲ ಮೆಲ್ಲನೆ ಬಂದನೇ ಗೋಪಮ್ಮ ಕೇಳೆ ಮೆಲ್ಲ ಮೆಲ್ಲನೆ ಬಂದನೇ" ಎನ್ನುವಂತೆ ಬಸವನ ಹುಳುವಿನ ಹೆಜ್ಜೆ ಹಾಕುತ್ತಾ ನಮ್ಮ ಬೀದಿಗೆ ಬಂದರೆ ಬೀದಿಯ ಪಕ್ಕ ಜನರ ಗುಂಪು ! ಅದೂ ಇಂತಹ ಉರಿಬಿಸಿಲಿನಲ್ಲಿ ! ನನಗೆ ಗಾಬರಿಯಾಯಿತು. ಇಷ್ಟು ಜನ ಸೇರಿರ ಬೇಕಾದರೆ ಒಂದು ಹುಟ್ಟು ಇಲ್ಲ ಸಾವು ಇಲ್ಲದೇ ಜಗಳ, ಜಗಳವಂತೂ ಆಗಿರಲಿಕ್ಕಿಲ್ಲ ಏಕೆಂದರೆ ಯಾರ ಬಾಯಿಯೂ ಕೇಳಿಸುತ್ತಿಲ್ಲ, ಸಾಯುವವರೂ ನಮ್ಮ ಬೀದಿಯಲ್ಲಿ ಯಾರೂ ಇರಲಿಲ್ಲ. ಇನ್ನು ಹುಟ್ಟು ಬೀದಿಯಲ್ಲಿ ಆಗಲು ಸಾಧ್ಯವಿಲ್ಲ. ಹತ್ತಿರ ಬಂದು ನೋಡಿದರೆ ಒಬ್ಬ ಸುಮಾರು 15–16 ವಯಸ್ಸಿನ ಹುಡುಗ ರಸ್ತೆಯ ಪಕ್ಕದಲ್ಲಿ ಗುಂಡಿ ತೋಡಿ ಒಲೆ ಹೂಡಿ ತಿದಿ ಊದುತ್ತಿದ್ದಾನೆ. ಲೋಹ ಕರಗಿಸುತ್ತಿದ್ದಾನೆ, ಕೊಡಗಳ ರಿಪೇರಿ ನಡೆಸಿರಬಹುದೆಂದರೆ ಅಲ್ಲೆಲ್ಲೂ ಕೊಡಗಳಿಲ್ಲ. ಏನಾದರೂ ನಡೆಸಿರ ಬಹುದೆಂದು ಮನೆಗೆ ಹೋಗಿ ತಣ್ಣೀರು ಸ್ನಾನಮಾಡಿ ಊಟಕ್ಕೆ ಕುಳಿತೆ. ಅಲ್ಲಿ ವಿಗ್ರಹ ಮಾಡ್ತಿದ್ದಾನಲ್ಲ ನೋಡಿದರೇನು ? ಎಂದಳು ಈಕೆ. ಕಾಂತಾ ಸಂಹಿತ ಶುರುವಾಯಿತು. "ಮಾಡ್ತಿರಬಹುದು, ಅದ್ರಲ್ಲೇನು ವಿಶೇಷ ? ಎಂದೆ ನಾನು ಅನ್ಯಮನಸ್ಕನಾಗಿ" ವಿಶೇಷವಲ್ದೇ ಮತ್ತೇನು ? ಅವನು ನಮ್ಮೋನ್ರಿ ನಮ್ಮೋನು ? ನಿನಗೇನು ಸಂಬಂಧ? ಹಂಗಲ್ರೀ ನಮ್ಮ ಜನ ಅಂದೆ, ರಹೀಂ ಅವನ ಹೆಸ್ರು ಹೊಟ್ಟೆ ಹೊರೆಯೋಕೆ ಏನೋ ಒಂದು ಮಾಡ್ತಾರೆ. ಅದರಲ್ಲಿ ಅಭಿಮಾನ ಪಡುವಂಥಾದ್ದೇನಿದೆ ? ಅಭಿಮಾನವಲ್ದೇ ಮತ್ತೇನ್ರಿ ? ಬೇರೆ ಜನರೇ ಹೊಗಳ್ತಾರೆ, ಅವನ ವಯಸ್ಸೆಷ್ಟು ? ಅವನು ವಿಗ್ರಹ ಮಾಡೋದು ನೋಡಿ ಅವನು ಕೇಳಿದಷ್ಟು ದುಡ್ಡು ಕೊಡ್ತಾರೆ. ಮರ್ಯಾದೆ ಕೊಡ್ತಾರೆ ಮುಸ್ಲಿಂ ವ್ಯಕ್ತಿ ಹಿಂದೂ ವಿಗ್ರಹ ಮಾಡುತ್ತಿರುವುದೇ ಈಕೆಯ ಅಭಿಮಾನಕ್ಕೆ ಕಾರಣ, ನಾನು ಮಾತು ಮುಂದುವರಿಸಲಿಲ್ಲ. ಈಕೆ ಇಷ್ಟು ಅಭಿಮಾನಪಡುವಂತಹ ಕಲೆ ಅವನಲ್ಲೇನಿದೆ ನೋಡೋಣ ಎಂದು ಮಧ್ಯಾಹ್ನದ ಬೆಕ್ಕಿನ ನಿದ್ದೆ ಬಿಟ್ಟು ಅವನಲ್ಲಿಗೆ ಹೋದೆ. ಸ್ಫುರದ್ರೂಪಿ ಹುಡುಗ ಗೌರವರ್ಣ ಬಿಸಿಲಿಗೆ ಬೆಂಕಿಗೆ ಸುಟ್ಟು ತಾಮ್ರ ವರ್ಣ ವಾಗಿದೆ ಹಾಕಿರುವ ಬಟ್ಟೆ ಬಿಚ್ಚಿಲ್ಲ, ತೊಳೆದಿಲ್ಲ ಮಸಿ ಹಿಡಿದು. ಬೆಂಕಿ ಕಿಡಿ ಹಾರಿ ಬಹ ಳಷ್ಟು ಸುಟ್ಟುಹೋಗಿವೆ. ತಿದಿ ಊದಿ ಲೋಹ ಕರಗಿಸುತ್ತಿದ್ದಾನೆ. ನಾನು ಕುತೂಹಲ ದಿಂದ ನೋಡುತ್ತ ನಿಂತೆ; ಕಂಚು ಕರಗಿದ ಮೇಲೆ ಮೊದಲೇ ತಯಾರಿಸಿದ ಮೌಲ್ಡ್‌ನಲ್ಲಿ ತಣ್ಣಗಾಗಲು ಬಿಟ್ಟು ತೆಗದರೆ ದೇವರ ಹುಟ್ಟಾಗುತ್ತಿತ್ತು. ನಾನು ಹೈಸ್ಕೂಲ್ ಓದು ವಾಗಿನ ನೆನಪು ಮರುಕಳಿಸಿತು. ನಮ್ಮ ತರಗತಿಯಲ್ಲಿ ನಾನೊಬ್ಬನೇ ಮುಸ್ಲಿಂ. ಚರಿತ್ರೆ ಯಲ್ಲಿ ಘಜ್ನಿ ಅಥವಾ ಘೋರಿ ಮಹಮ್ಮದನ ದಂಡಯಾತ್ರೆ, ಲೂಟಿ ಮೂರ್ತಿ ಭಂಜನದ ವಿಷಯ ಬಂದಾಗ ಎಲ್ಲ ಹುಡುಗರು ನನ್ನೆಡೆಗೆ ತಿರುಗಿ ನೋಡುತ್ತಿದ್ದರು.

ನನಗೆ ಮುಜುಗರವೆನ್ನಿಸುತ್ತಿತ್ತು. ಯಾರೋ ಯಾವಾಗಲೋ ಮಾಡಿದ ಹೇಯ ಕೃತ್ಯಕ್ಕೆ ನಾನು ಹೇಗೆ ಜವಾಬ್ದಾರ ? ಆ ಪಪಯು ಸದಾ ನೆನಪಿನೆ. ನೋಡುತ್ತ ನಿಂತ ನನಗೆ ಕುತೂಹಲ ತಡೆಯಲಾಗಲಿಲ್ಲ. 'ಇದು ಯಾವ ವಿಗ್ರಹ?' ಕೇಳಿದೆ ಶಿವಿ ರಾಮೇಂದ್ರ' ಅಲ್ಲೆ ನಿಂತಿದ್ದ ಕಿಡಿಗೇಡಿ ಪ್ರಹ್ಲಾದ "ಶ್ರೀರಾಮ ಅಯೋಧ್ಯೆಯಲ್ಲಿ ಹುಟ್ಟಿದ ಅಂತಾರೆ ಇವನು ಈ ರಸ್ತೆ ಬದಿಯಲ್ಲೇ ಹುಟ್ಟಿಸಿದ ನೋಡ್ರಿ" ಅಂದ ಹಾಗೆಲ್ಲ ಮಾತಾಡ್ಬಾರ್ದಪ್ಪ ಪಲ್ಲು, ಎಲ್ಲರ ಮನಮನದಲ್ಲಿ ಹುಟ್ಟಿದ್ದಾನೆ, ನೆಲೆಸಿದ್ದಾನೆ. ಮೌಲ್ಡ್ ನಿಂದ ವಿಗ್ರಹ ಹೊರ ತೆಗೆದ. ಬಹಳ ಚನ್ನಾಗಿ ಮೂಡಿ ಬಂದಿತ್ತು ಪ್ರಪಂಚಕ್ಕೇ ಅಭಯ ನೀಡುವ ಅಭಯ ಹಸ್ತದ ರಾಮ, ಸೀತೆ, ಲಕ್ಷ್ಮಣ, ಹನುಮಂತ."ಈ ಮೌಲ್ಡ ನೀನೇ ಮಾಡಿದ್ದೇನು ? ಎಂದೆ ನಾನು. "ಹೌದು ನಮ್ಮಪ್ಪ ಕಲಿಸಿದ" ಅವರು ಬಹಳ ಹೆಸರು ಮಾಡಿದ್ದರು, "ಇದೇ ಉದ್ಯೋಗ ಯಾಕೆ ಆರಿಸಿಕೊಂಡೆ ?" ಹೊಟ್ಟೆಗೆ ಏನಾದರೂ ಮಾಡ್ಬೇಕಲ್ಲ. ದೇವರು ಅಂದ್ರೆ ಹೆಚ್ಗೆ ದುಡ್ಡು ಸಿಗುತ್ತೆ. ಅಲ್ಲಿವರೆಗೂ ನಮ್ಮ ಮಾತುಕತೆ ಕೇಳುತ್ತಿದ್ದ ಪ್ರಹ್ಲಾದ ಶ್ರೀ ರಾಮನ ಕತೆ ಗೊತ್ತ ನಿನಗೆ ? ಇಲ್ಲ ಸಾರ್ "ರಾಮಾಯಣ ಸೀರಿಯಲ್ ನೋಡಿಲ್ವಾ ನೀನು ?" ಇಲ್ಲ ನಮಗೆಲ್ಲಿ ಪುರುಸೊತ್ತು. ಅಯೋಧ್ಯ. ಬಾಬ್ರಿ ಮಸೀದಿ ವಿಷಯ ಗೊತ್ತ ? ನಮಗೇನು ಗೊತ್ತ ಸಾರ್, ನಮ್ಮ ಕೈಯ್ಯಾಡಿದರೆ ನಮ್ಮ ಬಾಯಾಡುತ್ತೆ. ಆವಾಗ ಅದೇನೋ ಗಲಾಟೆ ನಡೀತಿತ್ತ ಸಾರ್, ಕೆಲ್ಸ ಇಲ್ದ ಮೂರು ಮೂರು ದಿನ ಉಪವಾಸ ಬಿದ್ವಿ. ಪ್ರಹ್ಲಾದನ ತಂದೆ ಕೂಗಿ ಕರೆದರು-.- "ಏ ಪಲ್ಲು, ಬಾರೋ ಶ್ರೀ ರಾಮನ ವಿಗ್ರಹ ಪ್ರತಿಷ್ಠಾಪಿಸಬೇಕು ಪುರೋಹಿತರನ್ನ ಪೂಜೆಗೆ ಕರೆದು ಬಾ" ಪಲ್ಲು ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ ಎಂದು ಹಾಡುತ್ತ ನಡೆದ.

## ಬರಿದಾದದ್ದು

ನಾನಾಗ ಯಾರ ಭಯವಿರದೆ
ಭತ್ತದ ಪೈರಿನಲ್ಲಿ ತೆನೆಬಂದ
ವಿಸ್ತಾರ ಹೊಲಗಳಲ್ಲಿ ಆಗಾಗ
ಬಂಗಾರ ವರ್ಣದ ಚಿಟ್ಟೆಗಾಗಿ
ದಣಿವಿರದ ಉತ್ಸಾಹದಲ್ಲಿ ಓಡಾಡಿದ್ದೆ
ಆಳ ಬಾವಿಯ ನೀರ ಕಲಕಿ
ರಭಸದಲೆಗಳ ನೆಬ್ಬಿಸಿದ್ದೆ
ಆದರೀಗ ಚಿಟ್ಟೆ ಕೈಕೊಟ್ಟಿದೆ
ತುಂಬಿದ ನೀರು ಬರಿದಾಗಿದೆ !

—ಸುರೇಂದ್ರ ಕೆರವಾಗಿ

# ಸ್ವಾತಂತ್ರ್ಯದ ಆನಂತರ ಅಧುನಿಕ ಕನ್ನಡ ಸಾಹಿತ್ಯ ಕಲಬುರಗಿ ಜಿಲ್ಲೆಯ ಕೊಡುಗೆ



ಡಾ. ಮಲ್ಲಿಕಾ ಘಂಟಿ

೧೯೪೭ ಆಗಸ್ಟ ೧೫ರ ಮಧ್ಯರಾತ್ರಿ ಭಾರತ ಬಿಡುಗಡೆ ಹೊಂದಿತೆಂದು ಘೋಷಣೆಯಾದರು ಇನ್ನು ಕೆಲವು ಭಾಗಗಳು ಸಂಸ್ಥಾನಗಳ ಅಡಿಯಲ್ಲಿ ಪಾರತಂತ್ರದ ನೊಗ ಹೇರಿಕೊಂಡೆ ಮುನ್ನಡೆದಿದ್ದವು. ಸ್ವಾತಂತ್ರ್ಯದ ಕೂಸು ಬ್ರಿಟಿಷ ಸಾಮ್ರಾಜ್ಯಶಾಹಿಯ ಗರ್ಭ ಸೀಳಿ ಬಂತೆಂದು ಸಂತೋಷಪಡುವ ಸಂದರ್ಭದಲ್ಲಿಯೆ ಅದರ ಅಂಕುಡೊಂಕಾದ ಅಂಗಾಂಗ ಕಂಡು ಮತ್ತೇ ತಿಕ್ಕು ಪ ತೀಡುವ ಕಾರ್ಯಕ್ಕೆ ಕೈ ಹಚ್ಚುವುದನ್ನು ನಿಲ್ಲಿಸುವಂತಿರಲಿಲ್ಲ. ಭಾರತೀಯರ ಹೃದಯ ಸೀಳಿ ಕಾಲ್ಕಿಗೆದ ಬ್ರಿಟಷರು ನಿರಂತರವಾಗಿ ಈ ನೆಲದಲ್ಲಿ ಮತೀಯ ಕಸ ಬೆಳೆಯುವಂತೆ ನೆಲ ಹದ ಮಾಡಿಟ್ಟು ಹೋದರು. ಸರ್ವ ಧರ್ಮಗಳ ಆಡುಂಬೊಲವಾದ ಈ ನೆಲದಲ್ಲಿ ಮತೀಯ ಮದ್ದಾನೆಗಳು ಗುದ್ದಾಡುವಂತೆ ಬ್ರಿಟಿಷರು ಹೂಡಿದ ಸಂಚು ಸಫಲವೂ ಆಯಿತು. ನಂತರದ ದಿನಗಳಲ್ಲಿ ಸ್ವಾರ್ಥ ಜಾತೀಯತೆ, ವಂಚನೆ, ಭ್ರಷ್ಟಾಚಾರಗಳ ಗಂಟೆಯನು ಅವರ ಕೊರಳಿಗೆ ಕಟ್ಟಿ ಓಡಿಸಿದವರು ದೇಶಿಯ ಪಟ್ಟಭದ್ರ ಹಿತಾಸಕ್ತರು.

ನೃಪತುಂಗ, ಶರಣರು, ದಾಸರಿಂದ ಸಾಹಿತ್ಯಿಕ ಸಾಂಸ್ಕೃತಿಕವಾಗಿ ಜಗತ್ತಿಗೆ ಬೆಳಕು ಚೆಲ್ಲಿದ ಈ ನೆಲಕ್ಕೆ ನಂತರದ ದಿನಗಳಲ್ಲಿ ಗ್ರಹಣ ಹಿಡಿದ ಹಾಗೇ ಕತ್ತಲಾಗಿದೆ. ಇವಕ್ಕೆ ರಾಜಕೀಯ ಸಾಮಾಜಿಕ ಕಾರಣಗಳುಂಟು.

ಕನ್ನಡ ಸಾಹಿತ್ಯದ ಅರುಣೋದಯ ಕಾಲದಲ್ಲಿ ಕರ್ನಾಟಕ ಸಾಂಸ್ಕೃತಿಕ ಮತ್ತು ರಾಜಕೀಯವಾಗಿಯೂ ಬೇರೆ ಬೇರೆ ಭಾಗಗಳಲ್ಲಿ ಹಂಚಿ ಹೋಗಿತ್ತು. ಒಂದು ಕಡೆ ಬಾಂಬೆ ಕರ್ನಾಟಕ, ಮದ್ರಾಸ ಕರ್ನಾಟಕ ಇನ್ನೊಂದು ಕಡೆ ಹಳೇ ಮೈಸೂರು ಮೊಗದೊಂದು ಕಡೆ ಹೈದರಾಬಾದ್ ಕರ್ನಾಟಕವೆಂದು ಗುರುತಿಸಿಕೊಂಡಿತ್ತು. ಇವುಗಳಲ್ಲಿ

ಹೈದರಾಬಾದ್ ಕರ್ನಾಟಕ ಹೊರತುಪಡಿಸಿ ಉಳಿದ ಮೂರು ಭಾಗಗಳಲ್ಲಿ ಏಕಕಾಲದಲ್ಲಿ ಅಲ್ಲದಿದ್ದರೂ ಹೆಚ್ಚು ಕಡಿಮೆ ಒಂದೇ ರೀತಿಯ ಸಾಹಿತ್ಯಿಕ ಕೃಷಿ ಪ್ರಾರಂಭವಾಗಿತ್ತು. ಆದರೆ ಈ ಭಾಗಗಳ ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ, ಭೌಗೋಳಿಕ ಸ್ಥಿತಿಗತಿಗಳೆಲ್ಲವೂ ಭಿನ್ನವಾಗಿದ್ದವು. ಇಂತಹ ಭಿನ್ನತೆಯ ಮಧ್ಯದಲ್ಲಿಯೂ ಭಾವನಾತ್ಮಕ ಐಕ್ಯತೆಯಿತ್ತು. ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣ, ಸುಧಾರಣಾವಾದ, ಗಾಂಧಿ ಪ್ರಭಾವ, ಇಂಗ್ಲೀಷ ಸಾಹಿತ್ಯದ ಪ್ರಭಾವ ಇತ್ಯಾದಿ ಆಂತರಿಕ ಮತ್ತು ಬಾಹ್ಯ ಒತ್ತಡಗಳೆಲ್ಲ ಸೇರಿ ಆ ಕಾಲದ ಸಾಹಿತ್ಯಕ್ಕೆ ವಿಶಾಲವಾದ ನೆಲೆಯೊದಗಿಸಿಕೊಟ್ಟವು. ಭಾವನಾತ್ಮಕ ಐಕ್ಯತೆಯ ಸಂಬಂಧಗಳು ಪ್ರಕಟವಾದ ರೀತಿಗಳಲ್ಲಿ ಆಯಾ ಪ್ರದೇಶಗಳ ವಿಶಿಷ್ಟತೆಗಳಿವೆ, ಪ್ರಾದೇಶಿಕ ನೆಲದ ಕಂಪಿದೆ. ಆಯಾ ಪ್ರದೇಶದ ಸಾಹಿತ್ಯಕ್ಕೆ ಪ್ರಭಾವ ಪ್ರೇರಣೆಗಳಲ್ಲಿಯೂ ಭಿನ್ನತೆಯಿದೆ. ಈ ಭಿನ್ನತೆಯೇ ಆಯಾ ಪ್ರದೇಶದ ಕಾವ್ಯ ಸತ್ವ ಹಾಗೂ ರಚನೆಯಲ್ಲಿಯ ಹಲವಾರು ವ್ಯತ್ಯಾಸಗಳಿಗೆ ಕಾರಣವೆನ್ನಬಹುದು,

ಇಡೀ ದೇಶಕ್ಕೆ ಬೆಳಕಾಗಿದ್ದರೂ ಹೈದ್ರಾಬಾದ್ ಕರ್ನಾಟಕ ನಿಜಾಮರ ಹಣತೆಯ ಕೆಳಗಿತ್ತು. ೧೯೪೮ರಲ್ಲಿ ಬೆಳಕು ಕಂಡ ಈ ಭಾಗ ಸಂಸ್ಕೃತಿಕವಾಗಿ ಮತ್ತು ಸಾಹಿತ್ಯಿಕ, ಶೈಕ್ಷಣಿಕವಾಗಿ ಮರಾಠಿ ಮತ್ತು ಉರ್ದುವಿನ ತೆಕ್ಕೆಯಲ್ಲಿ ಬಿಸಿಯುಸಿರು ಬಿಡುತ್ತಿತ್ತು. ಕನ್ನಡದ ದೀಪಕ್ಕೆ ಈ ಭಾಗದಿಂದ ತೈಲ ದೊರೆಯಲು ಕಾಲು ಶತಮಾನ ಕಾಯಬೇಕಾಯಿತು. ನಿಜಾಮರಿಂದ ಗಡಿಪಾರಿಗೆ ಒಳಗಾದ ಪಂಡಿತ ತಾರಾನಾಥರು ನಿಜಾಮರ ಗಡಿಯಲ್ಲಿದ್ದ ಕ್ರಾಂತಿ ಪತಾಕೆಯನ್ನು ಎತ್ತಿ ಹಿಡಿಯುತ್ತಲೇ 'ಪ್ರೇಮ' ಪತ್ರಿಕೆಯನ್ನು ಪ್ರಾರಂಭಿಸಿ ಕನ್ನಡಿಗರಿಗೆಲ್ಲ ಕನ್ನಡದ ಕೆಚ್ಚನ್ನು ತುಂಬಿದರು. ತಡವಾಗಿ ಎಚ್ಚೆತ್ತ ಈ ಭಾಗದ ಜನರ ಸಾಹಿತ್ಯ ಹಲವಾರು ಎಡರು ತೊಡರುಗಳನ್ನು ಎದುರಿಸುತ್ತ, ತಿರಸರ ಹಂಗಿನರಮನೆಯ ಆಶ್ರಯವಿಲ್ಲದೆ ಹುಲುಸಾಗಿಯೇ ಸೃಷ್ಟಿಯಾಗಿದೆ. ಆದರೆ ಕೇರುವ ತೂರುವ ಕೆಲಸವಾಗದೆ ರಾಶಿ ಹಾಗೆಯೇ ಉಳಿದಿದೆ.

'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂದು ನೃಪತುಂಗನಿಂದ ಕರೆಸಿಕೊಂಡ ಈ ಮಣ್ಣಿನ ಜನರು ಆಧುನಿಕ ಕಾಲವನ್ನು ಕುಳಿತು ಓದಿ ಕಾವ್ಯದ ಪರಿಣತಿಯನ್ನು ಸಾಧಿಸಬೇಕೆನ್ನುವಷ್ಟರಲ್ಲಿಯೇ ನವೋದಯದ ತೇರು ಮುಂದೆ ಸಾಗಿತ್ತು. ಏಕೀಕರಣದ ನಂತರದ ದಿನಗಳಲ್ಲಿ ಕರ್ನಾಟಕದ ಇನ್ನುಳಿದ ಭಾಗಗಳಲ್ಲಿ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎನ್ನುವ ಹಾಡು ಮನೆ ಮಾತಾದಾಗ ಈ ಭಾಗದಲ್ಲಿ ಕನ್ನಡದ ಅಕ್ಷರಾಭ್ಯಾಸ ಪ್ರಾರಂಭವಾಯಿತು. ಹೀಗಾಗಿ ಹೊಸಗನ್ನಡ ಸಾಹಿತ್ಯ ಚರಿತ್ರೆಯ ಪದರು ಪದರು ಬಿಚ್ಚುತ್ತ ಹೈದ್ರಾಬಾದ್ ಕರ್ನಾಟಕ ಅದರಲ್ಲಿಯೂ ಕಲಬುರ್ಗಿಯ ನೆಲಜಲದ ಹುಡುಕಾಟಕ್ಕೆ ತೊಡಗಿದಾಗ ಹಲವು ಪದರಿನಲ್ಲಿ ಏನು

ಸಿಗಲಿಕ್ಕಿಲ್ಲ. ಸಿಕ್ಕಷ್ಟೇ ಹೆಕ್ಕಿ ತೆಗೆಯುವ ಕಾರ್ಯಕ್ಕೆ ಕೈ ಹಾಕಬೇಕೆಂದರೆ ಸಿಕ್ಕು ಸಿಕ್ಕಾಗಿದೆ.

ಸುಮಾರು ಸಾವಿರ ಸಂಖ್ಯೆ ಮೀರುವಷ್ಟು ಈ ಭಾಗದ ಸಾಹಿತ್ಯ ಕೃತಿಗಳಿವೆ. ಇನ್ನೂರಕ್ಕೂ ಮಿಕ್ಕಿ ಸಾಹಿತಿಗಳಿದ್ದಾರೆ. ಅವರೆಲ್ಲರೂ ಕರ್ನಾಟಕದ ವ್ಯಾಪ್ತಿಗೆ ಸೇರುತ್ತಾರೆಂದು ಹೇಳುವುದು ಕಷ್ಟದ ಕೆಲಸ. ಕನ್ನಡದ ಸಾಹಿತ್ಯಕ್ಕೆ ಕಲಬುರ್ಗಿ ಜಿಲ್ಲೆಯ ಹೊಸಗನ್ನಡದ ಕೊಡುಗೆಯಲ್ಲಿಯೂ ಸ್ವಾತಂತ್ರ್ಯ ನಂತರದ ದಿನಗಳನ್ನು ಎದುರಿಟ್ಟುಕೊಂಡು ಹೊರಟ ನಾನು ನನ್ನ ಅಧ್ಯಯನದ ಅನುಕೂಲಕ್ಕಾಗಿ ಮತ್ತು ವಿಷಯವನ್ನು ಒಂದು ಚೌಕಟ್ಟಿಗೆ ತರಲು ಅನುಕೂಲವಾಗುವ ರೀತಿಯಲ್ಲಿ ಕೆಲವು ಕ್ರಮಗಳನ್ನು ಅನುಸರಿಸಿದ್ದೇನೆ. ಸೃಜನೇತರ ಸಾಹಿತ್ಯವನ್ನು ಹೊರತು ಪಡಿಸಿ ಒಂದಕ್ಕಿಂತ ಹೆಚ್ಚು ಕೃತಿಗಳನ್ನು ಪ್ರಕಟಿಸಿದವರನ್ನು ಈ ಸಂದರ್ಭದಲ್ಲಿ ಅಭ್ಯಾಸಕ್ಕೆ ಎತ್ತಿಕೊಂಡಿರುವೆ. ಹೀಗೆ ಮಿತಿಗೆ ನನ್ನನ್ನು ನಾನೇ ಒಳಪಡಿಸಿಕೊಂಡಾಗಲೂ ಕೃತಿಗಳ ಸಂಖ್ಯೆ ನೋಡಿದಾಗ ಇಡೀ ಕನ್ನಡ ಸಾಹಿತ್ಯದಲ್ಲಿ ಕಲಬುರ್ಗಿ ಜಿಲೆಯ ಸಾಹಿತ್ಯ ಒಂದು ನಡುಗಡ್ಡೆಯೊ ಪಾದಿಯಲ್ಲಿದೆ. ಇದು ಆಶ್ಚರ್ಯ, ಸಂಖ್ಯಾತ್ಮಕವಾಗಿ ಬೆಳೆದಿರುವ ಸಾಹಿತ್ಯವನ್ನು ಗುಣಾತ್ಮಕವಾಗಿ ನೋಡುವಾಗ ಒಂದಿಷ್ಟು ನಿರಾಶೆಯೂ ಆಗುವದು. ಕೃತಿ ಕೃತಿಕಾರರ ಸಂಖ್ಯೆ ಸುಮಾರಾಗಿ ಬೆಳೆದಿದ್ದರೂ ಅಖಿಲ ಕರ್ನಾಟಕ ಮಟ್ಟದಲ್ಲಿಟ್ಟು ನೋಡುವಾಗ ಈ ಸಂಖ್ಯೆ ಬೆರಳೆಣಿಕೆಯೊಳಗೆ ನಿಲ್ಲುತ್ತದೆ ಪ್ರಚಾರ ಮಾಧ್ಯಮದ ಕೊರತೆ, ಸಾಹಿತ್ಯಿಕ ಚಳುವಳಿಗಳ ಗಾಳಿ ಸುಳಿಯದೆ ಇರುವುದು. ಅಭ್ಯಾಸದ ಕೊರತೆ, ಪ್ರಯೋಗಾತ್ಮಕ ಗುಣ ಬೆಳೆಯದೆ ಇರುವುದು ಔದ್ಯೋಗಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆ ಅಷ್ಟಾಗಿ ಆಗದೆ ಇರುವುದು ಈ ಭಾಗದ ಸಾಹಿತ್ಯಿಕ ಬೆಳವಣಿಯ ಮಿತಿಗಳು.

ಬಿ. ಎಂ. ಶ್ರೀ ಯವರಿಂದ ನಾಂದಿ ಹಾಡಿಸಿಕೊಂಡು ಬಂದ ರಮ್ಯದ ಗಾಳಿ ಹಳೆ ಮೈಸೂರಿನಿಂದಲೇ ಇಷ್ಟಳಿದ ಭಾಗಕ್ಕೆ ಬೀಸಿತು. ಆದರೆ ಇಲ್ಲಿಯವರೆಗೆ ಆ ಗಂಧ ಗಾಳಿ (ಸೋಂಟಗಾಳಿ) ಬರಲೇ ಇಲ್ಲ.

ರಮ್ಯದ ಸಿಲುಗಡೆಯ ಕಾಲ ಭಾರತದ ಸ್ವಾತಂತ್ರ್ಯದ ಅರುಣೋದಯದ ಕಾಲವಾಗಿತ್ತು. ಹತ್ತಾರು ವರ್ಷ ಹತ್ತಾರು ಸಲ ನಿಸರ್ಗದವ್ವನ ಉಡಿಯಲ್ಲಿ ಜೋಗುಳ ಹಾಡಿಸಿಕೊಂಡು ಹಾಡಿದ ಮತ್ತು ನಲ್ಲೆಯ ನಿಡಿದೋಳಿನಲ್ಲಿ ಮೈಕೊಟ್ಟು. ಮೈಮರೆತು ಮೈದುಂಬಿ ಮಕ್ಕಳ ಕಿಲಕಿಲ ನಗುವಿನಲೆಯಲ್ಲಿ ಹಕ್ಕಿ ರೆಕ್ಕೆಯ ಮೇಲೆ ಹಳ್ಳ ಕೊಳ್ಳ ಸುತ್ತಾಡಿ ಸುಸ್ವಾದ ಕವಿ ಕುಲಕ್ಕೆ ನೆಲದ ಬಿಸಿ ತಾಗಿದ್ದು. ದಂತರದ ಮನೆಯ ಪರಾಕು ಪರಂಪರೆಯ ತೆರೆ ಹರಿದು ಹೊರ ಬರುವಂತೆ ಮಾಡಿದ್ದು ಸ್ವಾತಂತ್ರ್ಯ ನಂತರದ ದಿನ

ಗಳಲ್ಲಿಯೂ ರೈತ ಕಾರ್ಮಿಕರ ರಕ್ತದಲ್ಲಿ ನೆನೆದು ಗಗನಕ್ಕೇರಿದ ರಪ್ಟ್ಯಾದ ಸ್ವಾತಂತ್ರ್ಯ ಭಾವುಟ ಪ್ರಪಂಚದ ಎಲ್ಲ ಜನರ ಗಮನ ಸೆಳೆಯಿತು. ಸ್ವಾತಂತ್ರ್ಯದ ಆದರ್ಶ ಆವೇಶದ ಕಾವು ಆರಿದ ನಂತರದ ದಿನಗಳಲ್ಲಿ ಈ ನೆಲದ ಹಸಿವು ವಿಜ್ಞಾನ ಅನಕ್ಷರತೆ, ಬಡತನಗಳಲ್ಲಿ ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿಯುತ್ತಿರುವುದನ್ನು ಕಂಡು ಆದರ್ಶದ ಮಲು ಸರ್‍ರನೆ ಇಳಿಯಿತು. ಆಗ ಮಾತ್ರ ನಮ್ಮ ಕವಿಗಳಿಗೆ ಸ್ವಾತಂತ್ರ್ಯ ಬರಬೇಕಾದ ರೀತಿಯಲ್ಲಿ ಬರಲಿಲ್ಲ ಎಂಬುದು ಅರಿವಾಗಿ

'ತಾಯಾಗಿ ಬರಲಿರುವ ಸ್ವಾತಂತ್ರ್ಯವಿದು ಬಂತೆ
ಹಣದ ಮಕ್ಕಳ ಮನೆಯ ಸೂಳೆಯಾಗಿ೧

ಅಬ್ಬರಿಸಿದರು. ಈ ಕ್ರೋಧ ನೋವಿನ ನೆಲೆಯಿಂದ ಹೊರ ಹೊಮ್ಮಿದ್ದು ಅಸಹಾಯಕತೆ. ಅಸಹನಿಯೂ ಸಹ ಸ್ಫೋಟಕಗಳಾಗಿಯೇ ವ್ಯಕ್ತವಾದವು.

"ಬಿಡುಗಡೆಯಾದರು
ಬಡತನ ಬಿಡಲಿಲ್ಲ
ಸ್ವತಂತ್ರ ಬಂದರು
ಕುತಂತ್ರ ಬಿಡಲಿಲ್ಲ"

ಬೇಂದ್ರೆ, ಕುವೆಂಪು, ಅಡಿಗ, ಗೋಕಾಕರಂಥವರನ್ನು ಪ್ರಗತಿಶೀಲ ಕಾವ್ಯ ತನ್ನ ತೆಕ್ಕೆಗೆ ಒಗ್ಗಿಸಿಕೊಂಡಿತು ಗೋಕಾಕರಂತೂ ನವೋದಯಕ್ಕೆ ವಿದಾಯ ಹೇಳಿದ ತೀವ್ರತೆ ಪ್ರಗತಿಶೀಲಕ್ಕೂ ಅಂಟಿಕೊಂಡಿದ್ದು ಪ್ರಗತಿಶೀಲ ಕಾವ್ಯ ಪರಂಪರೆ ನಿರ್ಮಾಣಕ್ಕೆ ಒಂದಿಷ್ಟು ಬಾಧಕವಾಯಿತೇನೋ. "ಹೋಗಿ ಬರುವೆನು ನನ್ನ ಎಳೆಗನಸುಗಳೆ, ನಿಮ್ಮ ತಳಿರ್ಗಂಪು, ಹೂಗಂಪು, ತಂಗಾಳಿ ಮುಗಿದು ಸಮರವನು ಸಾರಿಪುದು ಅಮರ ಶಕ್ತಿಯದೊಂದು" ಎಂದು ನವೋದಯ ಪ್ರಗತಿಶೀಲಕ್ಕೂ ಶರಣು ಹೊಡೆದಂ ನಸ್ಯದ ಹರಿಕಾರರಾದರು.

ಇದೇ ಸಂದರ್ಭದಲ್ಲಿ ಬೇಂದ್ರೆಯಂಥವರೂ ಹಸಿವಿನ ಬಗ್ಗೆ ದೇವರು ಧರ್ಮದ ಬಗ್ಗೆ ಸಿಡಿದೆದ್ದರು.

---

೧ ಕಾಲದ ಕರೆ–ಗಂಗಾಧರ ಚಿತ್ತಾಲ ಪುಟ ಸಂಖ್ಯೆ 30
೨ ಪರಂಪರೆ– ಜಿ, ವರದರಾಜರಾವ್ ಪು 17

"ದೇವರದೊಂದು ಗೋರಿಯು ಕಟ್ಟಿ
ಧರ್ಮದ ಧೂಪಕೆ ಬೆಂಕಿಯನಿಕ್ಕಿ
........................
ಗಗರುತ್ತಿಹುದು ಗರ್ಜಿಸುತ್ತಿಹುದು
ಬಡವರ ಬಗ್ಗರ ತುತ್ತಿನ ಚೀಲದ
ಒಳಗಿನ ಒಳಗಿನ ಒಳದನಿಯೊಂದು೩

ಕುವೆಂಪುರವರು ಸಾಮಾಜಿಕ ಪರಿವರ್ತನೆಗೆ ಸಾಹಿತ್ಯ ಒಂದು ಅಸ್ತ್ರವಾಗಬೇಕು ಎಂದು ನಂಬಿದವರು. ಮತ್ತು ಇಂತಹ ನಂಬಿಕೆಗಳು ಮೂಡಲು ಜಾಗತಿಕವಾಗಿ ಆದ ಬದಲಾವಣೆಗಳು ಕಣ್ಣೆದುರಿಗಿದ್ದವು. ಹೀಗಾಗಿ ಕವಿ–ಕಲಿ ಎನ್ನುವುದನ್ನು

"ಕಬ್ಬಿಗನ ಲೇಖನಿಯು
ಕಠಾರಿಯಾಗುತ್ತಿರುವುದು
ಇಂಚರದ ಕೊಳಲು ಬಿಗಿದು
ಕಠೋರ ಭೇರಿಯಾಗುತಿದೆ"೪

ಅಡಿಗರಂತೂ ಮನುಜಪಥ ಚಲನೆಯನ್ನು ಪ್ರಾರಂಭಿಸಿದರು. ಜೊತೆಗೆ

"ನಾವೆಲ್ಲರೂ ಒಂದೇ ಜಾತಿ ಒಂದೆ ಮತ, ಒಂದೇ ಕುಲ
ನಾವು ಮನುಜರು"೫ ಎಂದೂ ಹಾಡಿದರು.

ಇಂತಹ ಪರಿಸರ ಕರ್ನಾಟಕದಾದ್ಯಂತ ದಟ್ಟವಾಗಿರುವಾಗ, ಪ್ರಗತಿಪಂಥದ ಸಂದೇಶವನ್ನು ಉಡಿಯಲ್ಲಿ ಕಟ್ಟಿಕೊಂಡು ಮನೆಮನೆಗೆ ತಲುಪಿಸಲು ಹೊರಟ ಅ.ನ.ಕ, ತ.ರಾ.ಸು ನಿರಂಜನ, ಬಸವರಾಜ ಕಟ್ಟೀಮನಿಯವರ ಪರಿಶ್ರಮದ ಪರಿಮಳ ಈ ನೆಲದ ಗಾಳಿಯಲ್ಲಿ ತೂರಿಕೊಳ್ಳಲಿಲ್ಲ. ಈ ಸಂದರ್ಭದಲ್ಲಿನ್ನು ಭಜನೆ ಪದಗಳು, ಪುರಾಣಗಳೇ ಕಾವ್ಯಗಳು ಎನ್ನುವ ಹಾಗೇ ಕಾವ್ಯ ಕೃಷಿ ನಡೆದಿತ್ತು. ಇಂತಹ ಪರಿಸರವಲ್ಲಿಯೂ ಕೆಲವು ಚೇತನಗಳು ಪರಿಸರ ಮೀರಿ ಉಸಿರಾಡಿ ಹೊಸ ಗಾಳಿಗೆ ಇಂಬುಗೊಟ್ಟಿದ್ದು ಅಂದು ಗಮನಾರ್ಹ ಸಂಗತಿಯೆ ಸರಿ. ಕಾವ್ಯಾನಂದ, ಚಂದ್ರಕಾಂತ ಕುಸನೂರ, ಪ್ರಭುರಾಜ ಅರಣಕಲ್, ವಸಂತ ಕುಷ್ಟಗಿ, ಶಿವಶರಣ ಜಾವಳಿ, ಶೈಲಜಾ ಉಡಚಣ, ಚೆನ್ನಣ್ಣ ವಾಲೀಕಾರ ಇವರೆಲ್ಲರ ಕಾವ್ಯ ಕೃಷಿ ಒಂದಲ್ಲ ಒಂದು ದೃಷ್ಟಿಯಿಂದ ಅಖಿಲ ಕರ್ನಾಟಕ

---

೩ ತುತ್ತಿನ ಚೀಲ-ಬೇಂದ್ರೆ
೪ ಕನ್ನಡದ ಪ್ರತಿಭಟನಾ ಕಾವ್ಯ- ಸಂ. ಸಿ. ವೀರಣ್ಣ
೫ ,, ,, ,,

ವ್ಯಾಪ್ತಿಯನ್ನು ಪಡೆಯುತ್ತದೆ ಎಂದರೆ ಉಳಿದವರು ಪ್ರತಿಷ್ಠೆಗೆ ಒಳಗಾಗುವುದು ಬೇಡ. ಎಲ್ಲ ಮಿತಿಗಳ ಮಧ್ಯದಲ್ಲಿಯೂ ಎಲ್ಲರ ಕಾವ್ಯ ದೃಷ್ಟಿಯ ಹಿಂದೆ ಇದ್ದ ಶ್ರದ್ಧೆ ಮಾತ್ರ ಮೆಚ್ಚುವಂತಹದ್ದೆ.

ಹೈದರಾಬಾದ್ ಕರ್ನಾಟಕದ ಅದರಲ್ಲಿಯೂ ಕಲಬುರ್ಗಿಯ ಭರವಸೆಯ ಕವಿಯಾಗಿ ಕನ್ನಡ ಕಾವ್ಯ ಕ್ಷೇತ್ರಕ್ಕೆ ಕಾಲಿಟ್ಟ ಸಿದ್ಧಯ್ಯ ಪುರಾಣಿಕರು 1953 ರಲ್ಲಿ 'ಜಲಪಾತ' ಪ್ರಕಟಿಸಿದರು.

"ಹೊಸ ಲೋಕವ ಕಟ್ಟುವ ಹೊಣೆ ಇಂದಿನ ಬಡವನದು
ಹೊಸ ಬಾಳನು ರಚಿಸುವ ಹೊಣೆ ನಾಳಿನ ದುಡಿವನದು೧

ಎಂಬಲ್ಲಿ ಬಸವಣ್ಣನ ಕಾಯಕ ನಿಷ್ಠೆ ಗುಪ್ತಗಾಮಿನಿಯಾಗಿ ಹರಿದಿದೆ.

"ಬಡವರೆಲುವುಗಳಿಂದ ಹುಡೆಯು ಕಟ್ಟಿಸಿಕೊಂಡು
ತಡೆವ ರಾರೆನ್ನನೆಂದುರಿದೆ ಬಹು ಧನಿಕ
ಸಿಡಿಲು ಹೊಡೆವಡೆ ಹಿಡಿದಕೊಡೆ ಕಾಯಬಲ್ಲುದೆ?
ಬಡ ಜನರ ದುಃಖವೇ ಬರಸಿಡಿಲು ದನಿಕ !"೨

ಬಂಡೆದ್ದ ಮನಸ್ಸಿಗೆ, ಆಕ್ರೋಶ, ಆವೇಶ ಕ್ರಾಂತಿ ತಂತುಗಳಾಗಿ ಬಂದಿವೆ "ಶರಣ ಸಂಸ್ಕೃತಿಯು ಉಸಿರಾಗಿ ಹೊರಹೊಮ್ಮಿದ ಇವರ ಕಾವ್ಯದಲೆಗಳು ಹಲವೊಂದು ಸಲ ಪ್ರಗತಿಪರ ಧೋರಣೆಯ ಹೊಸ ಕವಿಗಳನ್ನೂ ದಂಗುಗೊಳಿಸುವುದುಂಟು. ಅನೇಕ ಸಲ ಲೋಕ ನಿಷ್ಠುರ ಶರಣರಂತೆ ನಿರ್ಭಿಡೆಯ ನುಡಿಗಳನ್ನಾಡಿದಾಗ ವ್ಯವಸ್ಥೆಯ ಕೂಸುಗಳು ಮುಸು ಮುಸು ಮಾಡುವುದುಂಟು ಎಂದ ಬಿ. ಎ. ಸನದಿಯವರ ಅಭಿಪ್ರಾಯವನ್ನು ಒಪ್ಪುತ್ತಲೇ ಒಂದು ಮಾತನ್ನು ಸೇರಿಸಬಹುದೇನೋ. ಪ್ರಗತಿಪರ ಆಶಯವನ್ನಿಟ್ಟುಕೊಂಡು ಬರೆಯುತ್ತಿರುವ ಅಂದಿನಿಂದ ಇಂದಿನವರೆಗಿನ ಕವಿಗಳಲ್ಲಿ ಸೇರಿಸಬಹುದೇನೋ. ಆದರೆ ಪ್ರಗತಿಶೀಲ ಸಾಹಿತ್ಯದ ಘಟ್ಟದಲ್ಲಿ ಕಾಲಿಟ್ಟು ಬೇರು ಬಿಟ್ಟವರ ಪಟ್ಟಿಯಲ್ಲಿ ಸೇರಿಸಲು ಸಾಧ್ಯವಾಗದು. ಸಜ್ಜನಿಕೆ, ಸಾಂಪ್ರದಾಯಿಕ ಪರಂಪರೆಯಲ್ಲಿ ಇಂದಿಗೂ ನಂಬಿಕೆಯುಳಿಸಿಕೊಂಡು ಬಂದಿರುವಲ್ಲಿ ಸ್ಥಿತ ಪ್ರಜ್ಞೆಯನ್ನು ಗುರುತಿಸ

೧ ಜಲಪಾತ– ಕಾವ್ಯಾನಂದ
೨ ,, ,,
೩ ಕಾವ್ಯಾನಂದ ಅಂ. ಗ್ರಂ. ಕಾವ್ಯಸಾಧನೆ– ಬಿ. ಎ. ಸನದಿ ಪು. 500

ಬಹುದು. ಇದು ಕವಿಯ ಕಾವ್ಯದ ವಿಾತಿಯೂ ಆಗಬಹುದು, ಕವಿಯ ವ್ಯಕ್ತಿತ್ವವೂ ಆಗಬಹುದು,

"ನಿನ್ನ ಸತತ ಸಾಂಗತ್ಯವೇ ನನಗೆ ಬಾಳ ಬಲ
ಎಂದಿಗಾದರೂ ಒಮ್ಮೆ ಪೂರ್ಣತೆಯ
ಪಿಪಾಸೆ ಪಡೆಯುವ ನನ್ನಾಸೆ ಈಡೇರುವ ತನಕ ನೀನು ಜೊತೆಯಾಗು
ಭಾಷೆ ಕೊಡು"೧

ಕಾವ್ಯ ಕನ್ನಿಕೆಯ ಆರಾಧನೆ ಪರಂಪರೆಯ ಮುಂದುವರಿಕೆ ಇದು ಸಮಕಾಲೀನ ಕವಿ ಕಾವ್ಯದ ಪ್ರಭಾವಕ್ಕಿಂತಲೂ ವಚನಕಾರರ ಪ್ರಭಾವ ಇವರ ಸಾಹಿತ್ಯದುದ್ದಕ್ಕೂ ಗುಪ್ತ ಗಾಮಿನಿಯಾಗಿ ಕಾಲದ ಮೇರೆಗಳನ್ನು ವಿಾರದೆ ಹರಿದಿದ್ದಾಳೆ ಎನ್ನುವುದನ್ನು ಮೊದಲು ಮಾನವನಾಗು,

ರಾಜಕಾರಣಿಯಾಗು
ರಾಷ್ಟ್ರಭಕ್ತನೆ ಆಗು
ಕಲೆಗಾರ ವಿಜ್ಞಾನಿ ವ್ಯಾಪಾರಿಯಾಗು
ಏನಾದರೂ ಆಗು
ನೀ ಬಯಸಿದಂತಾಗು
ಏನಾದರೂ ಸರಿಯೆ, ಮೊದಲು ಮಾನವನಾಗು"೨

ಗುರುತಿಸಬಹುದು.

ರಾಷ್ಟ್ರ ಭಕ್ತಿ, ದೇಶಪ್ರೇಮ ಎಂಬುದು ಇಂದು ಮೌಲ್ಯವಾಗಿ ಉಳಿಯದೆ ನಗೆ ಪಾಟಲಿಗೆ ಒಳಗಾಗಿದೆ. ಆದರೆ ಸ್ವಾತಂತ್ರ್ಯ ಸಮರದ ನೆತ್ತರಿನಲ್ಲಿ ಕಾಲದ್ದಿ ಬಂದವರ ತೊಡೆಯ ಮೇಲೆ ಕುಳಿತ ಅಂದಿನ ಬಾಲಕರು ಇಂದು ಪ್ರಬುದ್ಧರು ಅವರಲ್ಲಿ ಇನ್ನು ಆ ಕೆಚ್ಚು, ಹುಚ್ಚು ಬಿಟ್ಟಿಲ್ಲ. ಬದುಕನ್ನು ಸುಂದರಗೊಳಿಸುವ ಸಲುವಾಗಿ ಸತ್ಯ, ನ್ಯಾಯ, ಸಮತೆ, ಧರ್ಮ ಎನ್ನುವ ಒಡವೆಗಳನ್ನೆಲ್ಲಾ ಹಳೆಯ ಪೆಟ್ಟಿಗೆಯಿಂದ ಇನ್ನು ಇನ್ನು ಹೊರ ತೆಗೆಯುತ್ತಾ, ಧರಿಸುತ್ತಾ ನಡೆದಿದ್ದಾರೆ. ಅಂಥವರಲ್ಲಿ ಪ್ರೊ. ವಸಂತ ಕುಷ್ಟಗಿ ಯವರು ಒಬ್ಬರು. ಗಾಂಧಿ, ಗಾಂಧಿವಾದದ ಬಗ್ಗೆ ಇನ್ನು ವ್ಯಾಮೋಹ ಉಳಿಸಿಕೊಂಡು

(ಮುಂದಿನ ಸಂಚಿಕೆ ನೋಡಿರಿ)

೧ ಕರುಣಾ ಶ್ರಾವಣ- ಕಾವ್ಯಾನಂದ
೨ ಮೊದಲು ಮಾನವನಾಗು— ಸಿದ್ದಯ್ಯ ಪುರಾಣಿಕ

ಹೊಸ ದಿಕ್ಕು ಪತ್ರಿಕೆಗೆ ಹಾರ್ದಿಕ ಅಭಿನಂದನೆಗಳು

ಸಗರ ನಾಡಿನ ನೆಲದಿಂದ
ಸಾಹಿತ್ಯ ಪತ್ರಿಕೆಯ
ಅಗತ್ಯವಿತ್ತು
ಆ ಕೊರತೆಯನ್ನು
ತುಂಬಿದ್ದೀರಿ,

ನಿಮಗೆ ನನ್ನ ಬೆಂಬಲ-ಸಹಕಾರವಿದೆ

○○



ಶ್ರೀ ಮಲ್ಲಣ್ಣ ಮಡ್ಡಿ
ಅಧ್ಯಕ್ಷರು, ತಾಲೂಕಾ ಜನತಾದಳ ಶಹಾಪುರ
ಕಲಬುರ್ಗಿ

'ಹೊಸ ದಿಕ್ಕು' ಪತ್ರಿಕೆಗೆ ಶುಭಾಶಯಗಳು

॥ ಶ್ರೀ ರೇವಣಸಿದ್ಧೇಶ್ವರ ಪ್ರಸನ್ನ ॥

ಫೋನ : 3345
ಮನೆ : 3445

# ಮೆ॥ ಎಸ್. ಎಸ್. ಉಪ್ಪಿನ ಆ್ಯಂಡ ಬ್ರದರ್ಸ

**ಬಸವೇಶ್ವರ ಚೌಕ ಶಹಾಪುರ ಜಿ. ಕಲಬುರ್ಗಿ**

* ಫಲದಾಯಕ ಗೊಬ್ಬರಗಳು
* ಪಿ. ಪಿ. ಕೆಮಿಕಲ್ಸ
* ಉತ್ತಮ ತಳಿಯ ಬೀಜಗಳು

---

ನಮ್ಮ ಅಂಗಡಿಗೆ ಭೆಟ್ಟಿ ಕೊಡಿ ಒಕ್ಕಲುತನದಲ್ಲಿ ಲಾಭ ಪಡೆದುಕೊಳ್ಳಿ.

---

# ಮೆ॥ ಎಸ್. ಎಸ್. ಉಪ್ಪಿನ ಆ್ಯಂಡ ಸನ್ಸ

## ಜನರಲ್ ಮರ್ಚಂಟ್ಸ ಶಹಾಪುರ

ದಿನನಿತ್ಯ ಬೇಕಾಗುವ ಕಿರಾಣಿ ಸಾಮಾನುಗಳು ಠೋಕ ಮತ್ತು ಚಿಲ್ಲರೆ ರೂಪದಲ್ಲಿ ನಮ್ಮ ಅಂಗಡಿಯಲ್ಲಿ ಲಭ್ಯ

* ಯೋಗ್ಯವಾದ ಬೆಲೆ
* ಉತ್ತಮ ಗುಣಮಟ್ಟದ ವಸ್ತುಗಳು
* ನಮ್ಮ ಅಂಗಡಿಯಲ್ಲಿ ಲಭ್ಯ

ಶೀಲವಂತಪ್ಪ ಉಪ್ಪಿನ

# ಸಾದಾರ ಸ್ವಿಕಾರಕ್ಕೆ ಬಂದ ಪುಸ್ತಕಗಳು

ಕುಟುಂಬ ಕಲ್ಯಾಣ ನಡೆದು ಬಂದ ದಾರಿ : ಪ್ರೊ. ಎಸ್. ಎಸ್, ಹಿರೇಮಠ
ಬೆಲೆ : 40-00 ಶಿವ ಪ್ರಶಾಂತ ಪ್ರಕಾಶನ ಗುಲಬರ್ಗಾ

ಪ್ರಸ್ತುತ ಇಂಡಿಯಾದ ಎಲ್ಲಾ ಸಮಸ್ಯೆಗಳ ಮೂಲ ಸಮಸ್ಯೆಯಾದ ಜನಸಂಖ್ಯಾ ಸಮಸ್ಯೆ ಹಾಗೂ ಅದರ ಪರಿಹಾರಗಳ ಬಗ್ಗೆ ಸಮಗ್ರವಾಗಿ ಅಂಕಿ ಅಂಶಗಳ ಆಧಾರವಾಗಿ ಮತ್ತು ಪರಿಣಾಮಕಾರಿಯಾಗಿ ಪರಿಸ್ಥಿತಿಯನ್ನು ವಿವರಿಸುವಲ್ಲಿ ಲೇಖಕರು ಯಶಸ್ವಿಯಾಗಿರುವದು ಈ ಸಂಕಲನ ತೋರುತ್ತವೆ. ಕುಟುಂಬ ಕಲ್ಯಾಣವೆಂದಾಕ್ಷಣವೇ ಆರೋಗ್ಯ ಇಲಾಖೆಯುವರ ಸಮಸ್ಯೆ ಇದು ಎಂದು ಭಾವಿಸುವ ಬೇಜವಾಬ್ದಾರಿ ಜನತೆಗೆ ಈ ಸಂಕಲನ ಪರಿಸ್ಥಿತಿಯನ್ನು ತಿಳಿಸಲು ಯಶಸ್ವಿಯಾಗಿದೆ. ಮೊದಲ ಎರಡು ಪ್ರಕರಣಗಳು ಸಾಮಾನ್ಯ ಓದುಗರಿಗೆ ಬೇಕಾಗಿಲ್ಲ. ಮೂರು ಮತ್ತು ನಾಲ್ಕನೆಯ ಪ್ರಕರಣಗಳ ಬಗ್ಗೆ ಜನತೆ ಮತ್ತು ಸರ್ಕಾರ ಯೋಚಿಸಿದರೆ ಕುಟುಂಬ ಕಲ್ಯಾಣದಲ್ಲಿ ಯಶಸ್ವಿಯಾಗಿ ದೇಶದ ಗಂಭೀರ ಸಮಸ್ಯೆಗಳು ಒಂದು ನೆಲೆಯಲ್ಲಿ ಪರಿಹಾರ ಕಾಣಬಲ್ಲವು ಎಂಬ ಹೊಳಹು ಈ ಸಂಕಲನದಲ್ಲಿದೆ. ಇಂತಹ ಸಂಕಲನಗಳನ್ನು ಕೊಂಡು ನಂತರ ಓದುವ ಕೊರತೆ ನಮ್ಮ ಜನಗಳಲ್ಲಿದೆ ಎನ್ನುವುದೇ ವ್ಯಸನಕರ.

—ಅನಾಮಿಕ

(ಸಾದರ ಸ್ವೀಕಾರಕ್ಕೆ ಈ ಮಧ್ಯೆ ಬಂದ ಪುಸ್ತಕಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವದು. ಲೇಖಕರು ತಮ್ಮ ಎರಡು ಕೃತಿಗಳನ್ನು ಕಳಿಸಲು ಕೋರಲಾಗಿದೆ.)

# ಈ ಸಂಚಿಕೆಯ ಲೇಖಕರು

೧ ಶಾಂತರಸ — ಆಜಾದನಗರ, ರಾಯಚೂರ (ಅಂಚೆ)
೨ ಬಿ. ಮಹಾದೇವಪ್ಪ — ಸಂ, ವಿಶ್ವಕಲ್ಯಾಣ ಇಂಡಸ್ಟ್ರಿಯಲ್ ಎಸ್ಟೇಟ ಕಲ್ಬುರ್ಗಿ
೩ ಸಿದ್ಧರಾಮ ಉಪ್ಪಿನ್ — ಅಂಚೆ : ಆಲಮೇಲ ತಾ. ಸಿಂದಗಿ (ಬಿಜಾಪೂರ)
೪ ಕುಂ. ವೀರಭದ್ರಪ್ಪ — ಅಂಚೆ : ಗೂಳ್ಯಂ ತಾ. ಕರ್ನೂಲ (ಆಂಧ್ರ ಪ್ರದೇಶ)
೫ ಡಾ. ಚೆನ್ನಣ್ಣ ವಾಲೀಕಾರ — ರೀಡರ್, ಕನ್ನಡ ವಿಭಾಗ ವಿ. ವಿ, ಗುಲಬರ್ಗಾ
೬ ಬಸು ಬೇವಿನಗಿಡದ — ಆಕಾಶವಾಣಿ ನಿಲಯ ಗುಲಬರ್ಗಾ
೭ ಟಿ. ಎನ್. ಷಣ್ಮುಖ — ಪ್ರಜಾಕೂಗು, ಜಾಲಿನಗರ ದಾವಣಗೇರೆ (ಚಿತ್ರದುರ್ಗ)
೮ ಎಂ. ಸಿ. ಅಂಟಿನ್ — ೮೬, ಶಾಂತಿನಗರ ಗುಲಬರ್ಗಾ
೯ ಈಶ್ವರಯ್ಯಮಠ — ಕನ್ನಡ ಅಧ್ಯಾಪಕ, ಎಂ.ಎಸ್.ಐ ಪದವಿ ಕಾಲೇಜ ಕಲ್ಬುರ್ಗಿ
*೧೦ ಸಿದ್ಧರಾಮ ಹೊನ್ಕಲ್ — ಹೊಸ ದಿಕ್ಕು ದಿಗ್ಗಿ ಬಿಲ್ಡಿಂಗ್ ಶಹಾಪುರ (ಕಲ್ಬುರ್ಗಿ)
೧೧ ಜಿ. ಮಲ್ಲಯ್ಯ ಪೋಲಂಪಲ್ಲಿ : — ದೋರನಹಳ್ಳಿ ತಾ. ಶಹಾಪುರ (ಕಲಬುರ್ಗಿ)
೧೨ ಎಚ್. ಬಾಷಾಸಾಹೇಬ — ಸಹಾಯಕ ಅಭಿಯಂತರು ಯು.ಕೆ.ಪಿ. ಕೆಂಭಾವಿ
೧೩ ಡಾ. ಮಲ್ಲಿಕಾ ಘಂಟಿ — ಕನ್ನಡ ಅಧ್ಯಾಪಕಿ ಗುಲಬರ್ಗಾ ವಿ. ವಿ. ಗುಲ್ಬರ್ಗಾ
೧೪ ಸುರೇಂದ್ರ ಕೆರಮಗಿ — ಅಂಚೆ ಕಮಲಾಪುರ ಜಿ. ಗುಲಬರ್ಗಾ

---

## ಸಂಕ್ರಮಣ ಸಾಹಿತ್ಯ ಸ್ಪರ್ಧೆ–೯೨

"ಸಂಕ್ರಮಣ ಪ್ರಕಾಶನ ಧಾರವಾಡ ಇವರಿಂದ ಪ್ರತಿವರ್ಷದಂತೆ ಸಾಹಿತ್ಯಸ್ಪರ್ಧೆ ನಡೆಸಲಾಗುತ್ತಿದೆ, ಕಥೆ (ಎರಡು) ಲಲಿತ ಪ್ರಬಂಧ (ಒಂದು) ಕವನ (ಹತ್ತು) ಹನಿಗವನ (ಇಪ್ಪತ್ತೈದು) ಆಯ್ಕೆ ಮಾಡಿ ಪುಸ್ತಕ ರೂಪದಲ್ಲಿ ಬಹುಮಾನ ನೀಡಲಾಗುವದು. ಪ್ರತಿಯೊಂದು ಹನಿಗವನಕ್ಕೆ ರೂ. ಎರಡು ಮತ್ತು ಇತರ ಪ್ರತಿಯೊಂದು ಪ್ರವೇಶಕ್ಕೆ ರೂ. ಐದು ಮಾತ್ರ ಪ್ರವೇಶಧನದೊಂದಿಗೆ ೩೦–೯–೯೨ ರ ಒಳಗೆ ಕೆಳಗಿನ ವಿಳಾಸಕ್ಕೆ ನಿಮ್ಮ ಬರಹಗಳನ್ನು ಕಳಿಸಿರಿ.

—ಸಂಪಾದಕರು ಸಂಕ್ರಮಣ ಪ್ಲಾಟ ನಂ. ೯೮,
ಯುರೇಕಾ ಕಾಲನಿ, ಧಾರವಾಡ ಅಂಚೆ.

# ಮಂಡಲ ಪಂಚಾಯತಿ ಶಿರವಾಳ

## ತಾ. ಶಹಾಪುರ ಜಿ. ಗುಲಬರ್ಗಾ

### ಜವಾಹರ ರೋಜಗಾರ ಯೋಜನೆಯಡಿಯಲ್ಲಿ ಸಾಧನೆಗಳ ಪಕ್ಷಿನೋಟ

1) ಮಂಡಲ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲಿ ಒಳರಸ್ತೆ ರಿಪೇರಿ ಮತ್ತು ಫರ್ಶಿಯನ್ನು ಹಾಸಲಾಗಿದೆ.
2) ಹೊಸೂರ, ಶಿರವಾಳ, ರೋಜಾ, ಹುರುಸಗುಂಡಗಿ ಮತ್ತು ಅಣವಿ ಗ್ರಾಮದಲ್ಲಿ ಹೆಣ್ಣು ಮಕ್ಕಳ ಶೌಚಾಲಯಗಳನ್ನು ನಿರ್ಮಿಸಲಾಗಿದೆ
3) ಅಣವಿಯಲ್ಲಿ ಮಹಿಳಾ ಮಂಡಲ ನವೀಕರಿಸಲಾಗಿದೆ
4) ಶಿರವಾಳ, ಹರಸಗುಂಡಗಿಯಲ್ಲಿ ಸಾಮೂಹಿಕ ಭವನ ನಿರ್ಮಾಣ ಮಾಡಲಾಗಿದೆ
5) ಇಟಗಾರೋಜಾ, ಶಿರವಾಳ, ಹಬ್ಬಳ್ಳಿ ಮತ್ತು ಅಣವಿಯಲ್ಲಿ ಶಾಲಾ ರಿಪೇರಿ ಮತ್ತು ಶಿರವಾಳದಲ್ಲಿ ಗ್ರಾಮ ಸೇವಕರ ವಸತಿ ನಿಲಯ ದುರಸ್ತಿ ಮಾಡಲಾಗಿದೆ.
6) ಹಬ್ಬಳ್ಳಿಯಲ್ಲಿ ಶಾಲೆ ಕೌಂಪೌಂಡ ನಿರ್ಮಾಣ
7) 21 ಜನ ಫಲಾನುಭಾವಿಗಳಿಗೆ ಕಡಿಮೆ ವೆಚ್ಚದ ಮನೆ ಯೋಜನೆಯಡಿಯಲ್ಲಿ ಜಿಂಕ ಶೀಟಗಳ ವಿತರಣೆ

ಮಂಡಲ ಪಂಚಾಯತಿ ಅಸ್ತಿತ್ವಕ್ಕೆ ಬಂದ ನಂತರ ಶಿರವಾರವಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಪಶುವೈದ್ಯಶಾಲೆಯನ್ನು ಪ್ರಾರಂಭಿಸಲಾಗಿದೆ ಅಲ್ಲದೇ ಹಬ್ಬಳ್ಳಿ ಹೊಸೂರಿನಲ್ಲಿ ಕಿರು ನೀರು ಸರಬರಾಜು ಯೋಜನೆಯಲ್ಲಿ ನಲ್ಲಿ ನೀರನ್ನು ಒದಗಿಸಲಾಗಿದೆ.

**ಮಾಧವ ವೆಂಕಟೇಶರಾವು**
ಕಾರ್ಯದರ್ಶಿ

**ರಾಮರಾವು ನರಸಿಂಗರಾವು**
ಪ್ರಧಾನರು




PRINTED MATER
BOOK-POST




ಗೆ.
ಶ್ರೀಮತಿ/ಶ್ರೀ

ಸಂಪಾದಕರು, ಪ್ರಕಾಶಕರು : ತಿಮ್ಮಯ್ಯ ಪುರ್ಲೆ, ಶಹಾಪುರ (ಕಲಬುರ್ಗಿ)
ಮುದ್ರಕರು : ಗ್ರಿನೋಬಲ್ಸ ಪ್ರಾ. ಲಿ., ಸುಪರ ಮಾರ್ಕೆಟ್, ಗುಲಬರ್ಗಾ-೧